ಸಾರ್ವಜನಿಕರಿಗೆ ತೊಂದರೆಯುಂಟಾಗುತ್ತಿದೆಯೆಂದು ತಿಳಿಸಿ, ಜಿಲ್ಲಾ ಆಸ್ಪತ್ರೆ, ಬಳ್ಳಾರಿಯ ಸರ್ವತೋಮುಖ ಅಭಿವೃದ್ಧಿಗಾಗಿ ಹಾಗೂ ಅಲ್ಲಿ ದಾಖಲಾಗುವವರಿಗೆ ತಜ್ಞರ ಸೇವೆ ಸಂಪೂರ್ಣವಾಗಿ ಲಭಿಸುವ ದೃಷ್ಟಿಯಿಂದ ಈ ಆಸ್ಪತ್ರೆಗಳನ್ನು ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯಿಂದ ಬೇರ್ಪಡಿಸಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಗೆ ನೀಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದಕ್ರ.ಸಂ. (4) ರ ಪತ್ರದಲ್ಲಿ, ಬಳ್ಳಾರಿ ಜಿಲ್ಲಾ ಆಸ್ಪತ್ರೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಗೆ ಹಸ್ತಾಂತರಿಸುವಂತೆ ಜನಪ್ರತಿನಿಧಿಗಳ ಕೋರಿಕೆಯ ಬಗ್ಗೆ ನಿರ್ದೇಶಕರು, ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಅವರ ಅಭಿಪ್ರಾಯವನ್ನು ಕೋರಲಾಗಿತ್ತು. ದಿನಾಂಕ:09.04.2015 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆ ಅವರು ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿಗೆ ಭೇಟಿ ನೀಡಿ, ಜಿಲ್ಲಾಧಿಕಾರಿ, ಬಳ್ಳಾರಿ ಹಾಗೂ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿಯ ಹಿರಿಯ ಅಧಿಕಾರಿಗಳೊಂದಿಗೆ ಈ ಕುರಿತಂತೆ ಚರ್ಚಿಸಿದಾಗ, ಬಳ್ಳಾರಿಯ ಜಿಲ್ಲಾ ಆಸ್ಪತ್ರೆಯನ್ನು ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಜಿಲ್ಲಾ ಶಸ್ತ್ರಚಿಕಿತ್ಸಕರ ನಿಯಂತ್ರಣಕ್ಕೆ ನೀಡಲು ತೀರ್ಮಾನಿಸಲಾಗಿರುತ್ತದೆ. ಆ ಹಿನ್ನೆಲೆಯಲ್ಲಿ, ದಿನಾಂಕ: 02.06.2015 ರಂದು ಎರಡೂ ಇಲಾಖೆಗಳ ನಿರ್ದೇಶಕರು, ವಿಮ್ಸ್, ಬಳ್ಳಾರಿಯ ನಿರ್ದೇಶಕರು, ಜಿಲ್ಲಾ ಶಸ್ತ್ರಚಿಕಿತ್ಸಕರು, ಬಳ್ಳಾರಿ ಅವರುಗಳ ಸಮ್ಮತಾಭಿಪ್ರಾಯದೊಂದಿಗೆ ಬಳ್ಳಾರಿಯ ಜಿಲ್ಲಾ ಆಸ್ಪತ್ರೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವಶಕ್ಕೆ ತೆಗೆದುಕೊಳ್ಳುವ ಕುರಿತಂತೆ ಈ ಕೆಳಕಂಡಂತೆ ನಿರ್ಣಯಿಸಲಾಗಿದೆ.

a) All the sanctioned posts of HFWS may be filled by 30th June 2015 by the Commissionerate of HFWS.
b) Both VIMS and HFWS staff work together cordially till HFWS fills up all the posts.
c) The Equipments, Furniture and Apparatus which are already in existence in the District Hospital are to be retained and the same may be utilized by the HFW Staff in the existing District Hospital Building.
d) A local committee consisting of the District Health and Family Welfare Officer, District Surgeon, the Medical Superintendents of District Hospital and Medical College Hospital, Ballari and Director, VIMS is to be formed which will meet once in a month and the District Surgeon, Ballari shall submit the compliance report to the Deputy Commissioner, Ballari and also submit the report through Director, HFWS to the Government.
e) The District Surgeon will take over the District Hospital complete charge by December 2015 from VIMS, Ballari and function independently with all primary and secondary care will be provided by the District Hospital of HFWS and tertiary care will have to be provided by the VIMS, Ballari of Medical Education Department.

ಅಲ್ಲದೇ, ಈ ಆಸ್ಪತ್ರೆಯ 01 ಕಿವಿ, ಮೂಗು ಮತ್ತು ಗಂಟಲುತಜ್ಞರ ಹುದ್ದೆಯನ್ನು ರೇಡಿಯಾಲಜಿ ತಜ್ಞತೆಯ ಹುದ್ದೆಗೆ ಪರಿವರ್ತಿಸಲು ಹಾಗೂ ಖಾಲಿಯಿರುವ ಹುದ್ದೆಗಳನ್ನು ಇಲಾಖೆಯ ವಿವಿಧ ಸಮುದಾಯ ಆರೋಗ್ಯಕೇಂದ್ರ ಹಾಗೂ ಸಾರ್ವಜನಿಕ ಆಸ್ಪತ್ರೆಗಳಿಂದ ವರ್ಗಾವಣೆ ಮುಖಾಂತರ ಹಾಗೂ ಅವಶ್ಯವಿದ್ದಲ್ಲಿ ರಾಷ್ಟ್ರೀಯ ಆರೋಗ್ಯ ಅಭಿಯಾನ ಕಾರ್ಯಕ್ರಮದಡಿಯಲ್ಲಿ ಗುತ್ತಿಗೆ ಆಧಾರದ ಮೇರೆಗೆ ತೆಗೆದುಕೊಳ್ಳಲೂ ಸಹ ತೀರ್ಮಾನಿಸಲಾಗಿದೆ. ಮುಂದುವರೆದು, ಈ ಆಸ್ಪತ್ರೆಯಲ್ಲಿ ಎಸ್‌ಎನ್‌ಸಿಯು ಅನ್ನು ಸ್ಥಾಪಿಸುವ ತನಕ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಎಸ್‌ಎನ್‌ಸಿಯು ಅನ್ನು ಬಳಸಿಕೊಳ್ಳಲು ಹಾಗೂ ಈ ಆಸ್ಪತ್ರೆಯ ವೈದ್ಯರು ಮತ್ತು ಇತರೆ ಸಿಬ್ಬಂದಿ ವರ್ಗದವರ ವೇತನ, ಭತ್ಯೆ, ಔಷಧ ಮತ್ತು ಬಳಕೆ ಪರಿಕರಗಳ ಸಲುವಾಗಿ 2015–16 ನೇ ಸಾಲಿನಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯಡಿಯಲ್ಲಿ ಅನುದಾನ ಕಲ್ಪಿಸಿದ್ದು, ಸದರಿ ಅನುದಾನದಿಂದ ಈ ಎಲ್ಲಾ ವೆಚ್ಚಗಳನ್ನು ಭರಿಸಲು ಹಾಗೂ ಏಪ್ರಿಲ್–2016 ರಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯ ಜಿಲ್ಲಾ ಆಸ್ಪತ್ರೆಯ ಪ್ರಾಧಿಕಾರವು ಈ ಆಸ್ಪತ್ರೆಗೆ ನಿಗದಿಪಡಿಸಿರುವ ಅನುದಾನವನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳಿಗೆ ಕಲ್ಪಿಸಿಕೊಳ್ಳಲೂ ಸಹ ಅಗತ್ಯಕ್ರಮ ವಹಿಸುವಂತೆ ನಿರ್ಧರಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ117 ಸಿಜಿಎಂ 2015, ಬೆಂಗಳೂರು, ದಿನಾಂಕ:04.08.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಳ್ಳಾರಿಯ ಜಿಲ್ಲಾ ಆಸ್ಪತ್ರೆಯ ಸರ್ವತೋಮುಖ ಅಭಿವೃದ್ಧಿಗಾಗಿ ಹಾಗೂ ಸದರಿ ಆಸ್ಪತ್ರೆಗೆ ಚಿಕಿತ್ಸೆಗಾಗಿ ಬರುವ ರೋಗಿಗಳಿಗೆ ತಜ್ಞರ ಸೇವೆ ಸಂಪೂರ್ಣವಾಗಿ ಲಭಿಸುವ ಹಾಗೂ ಹೆಚ್ಚಿನ ಅನುಕೂಲತೆಯನ್ನು ಕಲ್ಪಿಸುವ ದೃಷ್ಟಿಯಿಂದ ಬಳ್ಳಾರಿಯ ಜಿಲ್ಲಾ ಆಸ್ಪತ್ರೆಯನ್ನು ವೈದ್ಯಕೀಯ ಶಿಕ್ಷಣ ಇಲಾಖೆಯಿಂದ ಬೇರ್ಪಡಿಸಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಗೆ ಈ ಕೆಳಕಂಡ ಷರತ್ತುಗಳಿಗೊಳಪಡಿಸಿ ಹಿಂಪಡೆಯಲು ಆದೇಶಿಸಲಾಗಿದೆ.

1. ದಿನಾಂಕ: 02.06.2015ರ ನಡವಳಿಯಲ್ಲಿ ತಿಳಿಸಿರುವ ವೈದ್ಯಾಧಿಕಾರಿಗಳ ತಜ್ಞತೆಯನ್ನು ಹೊರತುಪಡಿಸಿ ಉಳಿದ ಎಲ್ಲಾ ಹುದ್ದೆಗಳನ್ನು ದಿನಾಂಕ: 31.08.2015 ರೊಳಗಾಗಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರು ಭರ್ತಿ ಮಾಡತಕ್ಕದ್ದು.
2. ಬಳ್ಳಾರಿಯ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಸಿಬ್ಬಂದಿ ವರ್ಗದವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ವತಿಯಿಂದ ಹುದ್ದೆಗಳನ್ನು ಭರ್ತಿ ಮಾಡುವ ತನಕ ಒಟ್ಟಾಗಿ ಸೌಹಾರ್ದಯುತವಾಗಿ ಕರ್ತವ್ಯ ನಿರ್ವಹಿಸತಕ್ಕದ್ದು.

3. ಈಗಾಗಲೇ ಜಿಲ್ಲಾ ಆಸ್ಪತ್ರೆಯ ಅಸ್ತಿತ್ವದಲ್ಲಿರುವ ಪರಿಕರ, ಪೀಠೋಪಕರಣ ಮತ್ತು ವೈದ್ಯಕೀಯ ಉಪಕರಣಗಳನ್ನು (apparatus) ಜಿಲ್ಲಾ ಆಸ್ಪತ್ರೆಯಲ್ಲೇ ಉಳಿಸಿಕೊಂಡು, ಅವುಗಳನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಸಿಬ್ಬಂದಿ ಬಳಸತಕ್ಕದ್ದು.
4. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ, ಜಿಲ್ಲಾ ಶಸ್ತ್ರಚಿಕಿತ್ಸಕರು, ಜಿಲ್ಲಾ ಆಸ್ಪತ್ರೆಯ ವೈದ್ಯಕೀಯ ಅಧೀಕ್ಷಕರು ಮತ್ತು ವೈದ್ಯಕೀಯ ಆಸ್ಪತ್ರೆ, ಬಳ್ಳಾರಿ ಮತ್ತು ನಿರ್ದೇಶಕರು, ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಒಂದು ಸ್ಥಳೀಯ ಸಮಿತಿ ರಚಿಸತಕ್ಕದ್ದು. ಸದರಿ ಸಮಿತಿಯು ತಿಂಗಳಿಗೆ ಒಂದು ಬಾರಿ ಸಭೆ ಸೇರಿ, ಅದರ ಅನುಪಾಲನಾ ವರದಿಯನ್ನು ಜಿಲ್ಲಾಧಿಕಾರಿ, ಬಳ್ಳಾರಿ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ನಿರ್ದೇಶಕರ ಮುಖಾಂತರ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
5. ಜಿಲ್ಲಾ ಶಸ್ತ್ರಚಿಕಿತ್ಸಕರು ಜಿಲ್ಲಾ ಆಸ್ಪತ್ರೆಯನ್ನು ಡಿಸೆಂಬರ್–2015 ರೊಳಗಾಗಿ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಅವರ ವಶದಿಂದ ಸಂಪೂರ್ಣವಾಗಿ ಪಡೆದುಕೊಳ್ಳತಕ್ಕದ್ದು ಮತ್ತು ಸ್ವತಂತ್ರವಾಗಿ ಎಲ್ಲಾ ಪ್ರಾಥಮಿಕ ಮತ್ತು ಎರಡನೇ ಹಂತದ ಚಿಕಿತ್ಸೆಯನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯ ಜಿಲ್ಲಾ ಆಸ್ಪತ್ರೆಯಲ್ಲೇ ಕಲ್ಪಿಸತಕ್ಕದ್ದು ಹಾಗೂ ತೃತೀಯ ಹಂತದ ಚಿಕಿತ್ಸೆಯನ್ನು ವೈದ್ಯಕೀಯ ಶಿಕ್ಷಣ ಇಲಾಖೆಯ ವ್ಯಾಪ್ತಿಯ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಅವರು ಕಲ್ಪಿಸತಕ್ಕದ್ದು.
6. ಈ ಆಸ್ಪತ್ರೆಯ ವೈದ್ಯರು ಮತ್ತು ಇತರೆ ಸಿಬ್ಬಂದಿ ವರ್ಗದವರ ವೇತನ, ಭತ್ಯೆ, ಔಷಧ ಮತ್ತು ಬಳಕೆ ಪರಿಕರಗಳ ಸಲುವಾಗಿ 2015–16 ನೇ ಸಾಲಿನಲ್ಲಿ ವೈದ್ಯಕೀಯ ಶಿಕ್ಷಣ ಇಲಾಖೆಯಡಿಯಲ್ಲಿ ಅನುದಾನ ಕಲ್ಪಿಸಿದ್ದು, ಸದರಿ ಅನುದಾನದಿಂದ ಈ ಎಲ್ಲಾ ವೆಚ್ಚಗಳನ್ನು ಭರಿಸತಕ್ಕದ್ದು.
7. ಏಪ್ರಿಲ್–2016 ರಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯ ಜಿಲ್ಲಾ ಆಸ್ಪತ್ರೆಯ ಪ್ರಾಧಿಕಾರವು ಈ ಆಸ್ಪತ್ರೆಗೆ ನಿಗಧಿಪಡಿಸಿರುವ ಅನುದಾನವನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳಿಗೆ ಕಲ್ಪಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಕೆ. ರಾಮಚಂದ್ರ**
ಸರ್ಕಾರದಉಪ ಕಾರ್ಯದರ್ಶಿ–1
ಆರೋಗ್ಯ ಮತ್ತುಕುಟುಂಬ ಕಲ್ಯಾಣ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೪) (೫೫೦ ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ - I | ಬೆಂಗಳೂರು, ಶುಕ್ರವಾರ, ಆಗಸ್ಟ್ ೦೭, ೨೦೧೫ (ಶ್ರಾವಣ ೧೬, ಶಕ ವರ್ಷ ೧೯೩೭) | ನಂ. ೯೧೦ |
|---|---|---|
| *Part - I* | *Bengaluru, Friday, August 07, 2015 (Shravana 16, Shaka Varsha 1937)* | *No. 910* |

**ಕರ್ನಾಟಕ ಸರ್ಕಾರದ ನಡವಳಿಗಳು**

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ಕನಕಪುರ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ನಅಇ 153 ಬಿಎಂಆರ್ 2013, ದಿನಾಂಕ:16-09-2013.

2) ಸಕಾರದ ಆದೇಶ ಸಂಖ್ಯೆ:ನಅಇ 27 ಬಿಎಂಆರ್ 2014, ದಿನಾಂಕ:05-03-2014.

3) ಪತ್ರ ಸಂಖ್ಯೆ:ಬಿಎಂಆರ್‌ಡಿಎ/ಎಂಪಿ/ಕೆಪಿಎ/01/2012-13, ದಿನಾಂಕ:12-06-2015.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಬರುವ ಕನಕಪುರ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿದ ತಾತ್ಕಾಲಿಕ (provisional) ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(1) ರನ್ವಯ ಕೆಲವು ನಿಬಂಧನೆಗಳಿಗೆ ಒಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿತ್ತು.

ನಂತರ, ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ತಾತ್ಕಾಲಿಕ ಮಹಾಯೋಜನೆಗೆ ಸಂಬಂಧಿಸಿದಂತೆ, ಸಾರ್ವಜನಿಕರಿಂದ ಸ್ವೀಕರಿಸಿರುವ ಸಲಹೆ/ಆಕ್ಷೇಪಣೆಗಳನ್ನು ಪರಿಶೀಲಿಸಲು ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ, ರವರ ಅಧ್ಯಕ್ಷತೆಯಲ್ಲಿ ಅಧಿಕಾರಿಗಳ ಸಮಿತಿಯನ್ನು ರಚಿಸಲಾಗಿತ್ತು.

ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರು ನಿಗಧಿತ ಅವಧಿಯೊಳಗೆ ಸ್ವೀಕರಿಸಿರುವ 373 ಆಕ್ಷೇಪಣೆ/ಸಲಹೆಗಳನ್ನು ಪರಿಶೀಲಿಸಿ ಸಮಿತಿ ಮಾಡಿರುವ ಶಿಫಾರಸ್ಸುಗಳ ಆಧಾರದ ಮೇರೆಗೆ ತಾತ್ಕಾಲಿಕ ಮಹಾಯೋಜನೆಯನ್ನು ಪರಿಷ್ಕರಿಸಿ ಅಂತಿಮ ಮಹಾಯೋಜನೆ ತಯಾರಿಸಿ, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(2) ರನ್ವಯ ಅಗತ್ಯ ಕ್ರಮ ಜರುಗಿಸಿ, ಮೇಲೆ (3) ರಲ್ಲಿ ಓದಲಾದ ಪತ್ರದೊಂದಿಗೆ ಮಹಾಯೋಜನೆಯ ನಕ್ಷೆ ಹಾಗೂ ವರದಿ ಇವುಗಳನ್ನು ಸರ್ಕಾರದ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಕನಕಪುರ ಯೋಜನಾ ಪ್ರದೇಶದ ಮಹಾಯೋಜನೆಯನ್ನು 2031 ನೇ ಇಸವಿಗೆ ತಯಾರಿಸಿದ್ದು, ಕನಕಪುರ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 11437.69 ಹೆಕ್ಟೇರ್ ಪ್ರದೇಶವನ್ನು ನಗರದ ಅಭಿವೃದ್ಧಿಗಾಗಿ ನಗರೀಕರಣದ ಎಲ್ಲೆ ಎಂದು ಪ್ರಸ್ತಾಪಿಸಿ ಮಹಾಯೋಜನೆಯನ್ನು ರೂಪಿಸಲಾಗಿದ್ದು, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ (12) ರಲ್ಲಿ ನಿಗಧಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ 11437.69 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 4660.09 ಹೆಕ್ಟೇರ್ (ಶೇ.40.74), ವಾಣಿಜ್ಯಕ್ಕಾಗಿ 653.95 ಹೆಕ್ಟೇರ್ (ಶೇ.5.72), ಕೈಗಾರಿಕೆಗಾಗಿ 2354.00 ಹೆಕ್ಟೇರ್ (ಶೇ.20.58) ಸಾರ್ವಜನಿಕ ಮತ್ತು ಅರೆಸಾರ್ವಜನಿಕ ಸೌಲಭ್ಯಕ್ಕಾಗಿ 564.45 ಹೆಕ್ಟೇರ್ (ಶೇ.4.93), ಉದ್ಯಾನವನ/ಆಟದ ಮೈದಾನ/ಸ್ಮಶಾನ ಪ್ರದೇಶಕ್ಕಾಗಿ 1068.90 ಹೆಕ್ಟೇರ್ (ಶೇ.9.35), ಸಾರ್ವಜನಿಕ ಸೌಲಭ್ಯಕ್ಕಾಗಿ 205.87 ಹೆಕ್ಟೇರ್ (ಶೇ.1.80), ಸಾರಿಗೆ ಮತ್ತು ಸಂಪರ್ಕಕ್ಕಾಗಿ 1519.01 ಹೆಕ್ಟೇರ್ (ಶೇ.13.28), ಜಲಾವೃತ ಪ್ರದೇಶಕ್ಕಾಗಿ 337.19 ಹೆಕ್ಟೇರ್ (ಶೇ.2.95) ಮತ್ತು ಅರಣ್ಯ (Forest) ಪ್ರದೇಶಕ್ಕಾಗಿ 74.23 (ಶೇ.0.65) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(3) ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಉದ್ದೇಶಿತ ಮಹಾಯೋಜನೆ ಅಡಿ ಭೂ ಉಪಯೋಗಕ್ಕೆ ಸಂಬಂಧಿಸಿದ ವಿವರ ಈ ಕೆಳಗಿನಂತೆ ಇರುತ್ತದೆ.

| ಕ್ರ.ಸಂ. | ಭೂ ಉಪಯೋಗ | ಅನುಮೋದಿತ ಕರಡು ಮಹಾಯೋಜನೆ 2031ರ ಭೂ ಬಳಕೆ ವಿವರ (ಹೆಕ್ಟೇರ್‌ಗಳಲ್ಲಿ) | | ಅಂತಿಮಗೊಳಿಸಿದ ಮಹಾಯೋಜನೆ 2031ರ ಭೂ ಬಳಕೆ ವಿವರ (ಹೆಕ್ಟೇರ್‌ಗಳಲ್ಲಿ) | |
|---|---|---|---|---|---|
| | | ವಿಸ್ತೀರ್ಣ | % | ವಿಸ್ತೀರ್ಣ | % |
| 1 | ವಸತಿ | 3982.94 | 39.23 | 4660.09 | 40.74 |
| 2 | ವಾಣಿಜ್ಯ | 323.47 | 3.19 | 653.95 | 5.72 |
| 3 | ಕೈಗಾರಿಕೆ | 1668.96 | 16.44 | 2354.00 | 20.58 |
| 4 | ಸಾರ್ವಜನಿಕ/ಅರೆ ಸಾರ್ವಜನಿಕ ಮತ್ತು ಸಾರ್ವಜನಿಕ ಸೌಲಭ್ಯ | 619.64 | 6.10 | 564.45 | 4.93 |
| 5 | ಉದ್ಯಾನವನ/ಆಟದ ಮೈದಾನ/ಸ್ಮಶಾನ | 1003.17 | 9.88 | 1068.90 | 9.35 |
| 6 | ಸಾರ್ವಜನಿಕ ಸೌಲಭ್ಯ | 240.86 | 2.37 | 205.87 | 1.80 |
| 7 | ಸಾರಿಗೆ ಮತ್ತು ಸಂಪರ್ಕ | 1235.78 | 12.17 | 1519.01 | 13.28 |
| 8 | ವ್ಯವಸಾಯದ ಜಮೀನು | 514.03 | 5.06 | 0.00 | 0.00 |
| 9 | ಜಲಾವೃತ ಪ್ರದೇಶ | 479.00 | 4.72 | 337.19 | 2.95 |
| 10 | Hillock's/Quarries | 0.00 | 0.00 | 0.00 | 0.00 |
| 11 | Forest | 84.35 | 0.83 | 74.23 | 0.65 |
| | **ಒಟ್ಟು** | **10152.20** | **100.00** | **11437.69** | **100.00** |

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ನಅಇ 153 ಬಿಎಂಆರ್ 2013, ಬೆಂಗಳೂರು ದಿನಾಂಕ:07-08-2015.**

ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಬರುವ ಕನಕಪುರ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆ 2031 ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(3) ರನ್ವಯ ಈ ಕೆಳಗಿನ ನಿಬಂಧನೆಗಳಿಗೆ ಒಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1) ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು (02) ವರ್ಷಗಳವರೆಗೆ ಪ್ರಾಧಿಕಾರವು ಯಾವುದೇ ಭೂ ಉಪಯೋಗ ಬದಲಾವಣೆ ಪ್ರಸ್ತಾವನೆ ಸಲ್ಲಿಸತಕ್ಕದ್ದಲ್ಲ;
2) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದಿಂದ ನಿರ್ಮಿಸಲು ಉದ್ದೇಶಿಸಿರುವ Satellite Town Ring Road (STRR), Individual Town Ring Road (ITRR), Intermediate Ring Road (IRR) ಹಾಗೂ Ring Road (RR) ರಸ್ತೆಗಳ ಅಂತಿಮ ಪಂಕ್ತೀಕರಣವನ್ನು ಅಭಿವೃದ್ಧಿಗೆ ಅನುಮೋದಿಸುವ ಮೊದಲು ಪರಿಶೀಲಿಸತಕ್ಕದ್ದು.
3) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 69(1) ರ ಪ್ರಕಾರ, ಈ ಆದೇಶದ ದಿನಾಂಕದಿಂದ 5 ವರ್ಷಗಳೊಳಗೆ ಉದ್ಯಾನವನ, ಬಯಲು ಜಾಗ, ಆಟದ ಮೈದಾನ ಮತ್ತು ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ ಮೀಸಲಿಟ್ಟ ಜಮೀನುಗಳನ್ನು ನಿಯಮಾನುಸಾರ ಭೂ ಸ್ವಾಧೀನಪಡಿಸಿಕೊಳ್ಳಲು ಕ್ರಮ ವಹಿಸುವುದು.
4) ಮಹಾಯೋಜನೆಯಲ್ಲಿ ಗುರುತಿಸಲಾಗಿರುವ ಸರ್ವೆ ನಂಬರ್‌ಗಳು, ನಾಲೆ/ಅತಿ ಹೆಚ್ಚು ವಿದ್ಯುತ್ ವಾಹಕ ತಂತಿಗಳು/ಹಾಲಿ ರಸ್ತೆ/ಕೆರೆ/ಕೊಳಗಳಲ್ಲಿ ಯಾವುದಾದರೂ ತಪ್ಪಿದ್ದಲ್ಲಿ ಅಂತಹ ತಪ್ಪುಗಳನ್ನು ಸೂಕ್ತ ದಾಖಲೆಗಳೊಂದಿಗೆ ಸ್ಥಳ ಪರಿಶೀಲಿಸಿ ದೃಢಪಡಿಸಿಕೊಂಡು ವಾಸ್ತವಾಂಶಗಳನ್ನು ಗಣನೆಗೆ ತೆಗೆದುಕೊಂಡು ಪ್ರಾಧಿಕಾರವು ಸರಿಪಡಿಸಿಕೊಳ್ಳತಕ್ಕದ್ದು;
5) ಮಹಾಯೋಜನೆಯಲ್ಲಿ ಗುರುತಿಸಿರುವ ಅಧಿಕ ವಿದ್ಯುತ್‌ವಾಹಕ ತಂತಿ, ರಸ್ತೆ, ನಾಲೆಯ ಪಂಕ್ತೀಕರಣದಲ್ಲಿ ಹಾಗೂ ಭೂಮಿಯ ಮೇಲೆ ಹಾಲಿ ಇರುವ ಪಂಕ್ತೀಕರಣದಲ್ಲಿ ವ್ಯತ್ಯಾಸವಿದ್ದಲ್ಲಿ, ಇರುವ ಪಂಕ್ತೀಕರಣದನ್ವಯ ಗುರುತಿಸಿದ ನಂತರ ಉಳಿಯುವ ಜಾಗವನ್ನು ಜಮೀನಿಗೆ ಹೊಂದಿಕೊಂಡಿರುವ ಭೂ ಉಪಯೋಗವನ್ನು ನಿಗದಿಪಡಿಸಬಹುದು;

6) ಹಾಲಿ ರಸ್ತೆಯ ಪಂಕ್ತೀಕರಣವನ್ನು ಮಹಾಯೋಜನೆಯಲ್ಲಿ ತಪ್ಪಾಗಿ ಗುರುತಿಸಿದಂತಹ ಪ್ರಕರಣಗಳಲ್ಲಿ ಸೂಕ್ತ ದಾಖಲೆಗಳೊಂದಿಗೆ (Cadastral Map) ಹಾಲಿ ಭೂಮಿಯ ಮೇಲಿರುವ ರಸ್ತೆ ಪಂಕ್ತೀಕರಣವನ್ನು ರಸ್ತೆ ಅಗಲೀಕರಣ ಮಾಡುವಾಗ ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು ಹಾಗೂ ಮಹಾಯೋಜನೆಯಲ್ಲಿ ಹಾಲಿ ರಸ್ತೆಯನ್ವಯ ಪಂಕ್ತೀಕರಣ ಅಳವಡಿಸಿಕೊಂಡ ನಂತರ ಉಳಿಯುವ ಜಾಗವನ್ನು ಪ್ರಸ್ತುತ ಜಮೀನಿಗೆ ಹೊಂದಿಕೊಂಡಿರುವ ಭೂ ಉಪಯೋಗ (Higher land use) ನಿಗದಿಪಡಿಸಿಕೊಳ್ಳತಕ್ಕದ್ದು.

ಕನಕಪುರ ಯೋಜನಾ ಪ್ರದೇಶದ ಮಹಾಯೋಜನೆ–2031 ಕ್ಕೆ ಸಂಬಂಧಿಸಿದ ವರದಿ ಮತ್ತು ಭೂ ಉಪಯೋಗ ಯೋಜನೆಯ ಎಲ್ಲಾ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆ ಹಾಕಿ, ಸಂಬಂಧಪಟ್ಟ ಅಧಿಕಾರಿ ಸಹಿ ಮಾಡಲು ಕ್ರಮ ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ನರಸಿಂಹಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೩) (೧೦೦ ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ - I | ಬೆಂಗಳೂರು, ಮಂಗಳವಾರ, ಆಗಸ್ಟ್ ೨೫, ೨೦೧೫ (ಭಾದ್ರಪದ ೦೩, ಶಕ ವರ್ಷ ೧೯೩೭) | ನಂ. ೯೪೬ |
|---|---|---|
| *Part - I* | *Bengaluru, Tuesday, August 25, 2015 (Bhadrapada 03, Shaka Varsha 1937)* | *No. 946* |


**ಕರ್ನಾಟಕ ಸರ್ಕಾರದ ನಡವಳಿಗಳು**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸೇವೆಯಲ್ಲಿ 20 ವರ್ಷಗಳ ಸೇವೆ ಸಲ್ಲಿಸಿದ ಉಪ ಮುಖ್ಯ ವೈದ್ಯಾಧಿಕಾರಿ ಹಾಗೂ ಹಿರಿಯ ತಜ್ಞ ವೃಂದದ ಅಧಿಕಾರಿಗಳಿಗೆ ಕಾಲಮಿತಿ ಮುಂಬಡ್ತಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಆಕುಕ 222 ಎಂಎಸ್ಎಸ್ 1990, ದಿನಾಂಕ:19-7-1991
2) ಸರ್ಕಾರದ ಆದೇಶ ಸಂಖ್ಯೆ:ಆಕುಕ 557 ಹೆಚ್ಎಸ್ಹೆಚ್ 2011, ದಿನಾಂಕ:3-1-2012
3) ಸರ್ಕಾರಿ ಆದೇಶ ಸಂಖ್ಯೆ:ಆಕುಕ 26 ಹೆಚ್ಎಸ್ಹೆಚ್ 2013, ದಿನಾಂಕ:22-5-2014
4) ಸರ್ಕಾರದ ಆದೇಶ ಸಂಖ್ಯೆ:ಆಕುಕ 131 ಹೆಚ್ಎಸ್ಹೆಚ್ 2015, ದಿನಾಂಕ:13-07-2015
5) ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರ ಪತ್ರ ಸಂಖ್ಯೆ:ಹೆಚ್ಆರ್ಓ 121/2014-15 ದಿನಾಂಕ: 20/07/2015

**ಪ್ರಸ್ತಾವನೆ:**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ನೇಮಕಗೊಳ್ಳುವ ವೈದ್ಯಾಧಿಕಾರಿ/ತಜ್ಞ ವೈದ್ಯರಿಗೆ ಬಡ್ತಿಯ ಅವಕಾಶಗಳ ಕೊರತೆಯಿಂದ ಹಾಗೂ ವೈದ್ಯರುಗಳ ಕಾರ್ಯಕ್ಷಮತೆ/ದಕ್ಷತೆ ಹೆಚ್ಚಿಸುವ ಉದ್ದೇಶದಿಂದ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ (ಅಂದಿನ Assistant Surgeon cum Health Officers) ನೇಮಕಗೊಳ್ಳುವ ಎಂಬಿಬಿಎಸ್ ವಿದ್ಯಾರ್ಹತೆಯ ವೈದ್ಯಾಧಿಕಾರಿಗಳು 6 ವರ್ಷಗಳ ಸೇವೆ ಪೂರೈಸಿದರೆ ಕಾಲಮಿತಿ ಮುಂಬಡ್ತಿ ಯೋಜನೆಯಡಿ ಹಿರಿಯ ವೈದ್ಯಾಧಿಕಾರಿಯಾಗಿ ಹಾಗೂ ಸ್ನಾತಕೋತ್ತರ ಪದವಿ/ಡಿಪ್ಲೊಮಾ ಹೊಂದಿದ್ದಲ್ಲಿ ತಜ್ಞ ವೈದ್ಯರಾಗಿ ಮುಂಬಡ್ತಿ ಪಡೆಯಲು ಹಾಗೂ ಸದರಿ ಹಿರಿಯ ವೈದ್ಯಾಧಿಕಾರಿ/ತಜ್ಞರು 13 ವರ್ಷಗಳ ಸೇವೆ ಪೂರೈಸಿದರೆ ಕ್ರಮವಾಗಿ ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರಾಗಿ ಮುಂಬಡ್ತಿ ಪಡೆಯಲು ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ:19-7-1991 ರ ಸರ್ಕಾರಿ ಆದೇಶದಲ್ಲಿ ಅವಕಾಶ ಕಲ್ಪಿಸಲಾಗಿದೆ. ಈ ಹುದ್ದೆಗಳು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೇರ್ಪಡೆಯಾಗಿವೆ.

ಸರ್ಕಾರದ ಸಾಮಾನ್ಯ ನೀತಿಯ ಪ್ರಕಾರ ಒಬ್ಬ ಸರ್ಕಾರಿ ನೌಕರನು ತನ್ನ ಸೇವಾವಧಿಯಲ್ಲಿ 3 ಪದೋನ್ನತಿಗಳನ್ನು ಪಡೆಯುವ ಅವಕಾಶವಿರಬೇಕು ಎಂಬ ಹಿನ್ನೆಲೆಯಲ್ಲಿ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರಾಗಿ ಕೇವಲ 2 ಕಾಲಮಿತಿ ಪದೋನ್ನತಿಗಳನ್ನು ಪಡೆದು ಮುಂದಿನ ಬಡ್ತಿಯ ಅವಕಾಶದಿಂದ ವಂಚಿತರಾಗುತ್ತಿರುವುದನ್ನು ಪರಿಗಣಿಸಿ, ಈ ಒಂದು ಅಸಮತೋಲನವನ್ನು ಸರಿಪಡಿಸುವ ಉದ್ದೇಶದಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ 20 ವರ್ಷಗಳ ಸೇವೆ ಸಲ್ಲಿಸಿ ಪ್ರಸ್ತುತ ಉಪ ಮುಖ್ಯ ವೈದ್ಯಾಧಿಕಾರಿ ಹಾಗೂ ಹಿರಿಯ ತಜ್ಞರಾಗಿ ಕರ್ತವ್ಯ ನಿರ್ವಹಿಸುತ್ತಿರುವವರಿಗೆ ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ವೇತನ ಶ್ರೇಣಿ ರೂ.38100-55200 ರಲ್ಲಿ ಕ್ರಮವಾಗಿ ಉಪ ಮುಖ್ಯ ವೈದ್ಯಾಧಿಕಾರಿ (ಆಯ್ಕೆ ಶ್ರೇಣಿ) ಹಾಗೂ ಹಿರಿಯ ತಜ್ಞರು (ಆಯ್ಕೆ ಶ್ರೇಣಿ) ಎಂಬುದಾಗಿ ಪದನಾಮೀಕರಿಸಿ, 3ನೇ ಕಾಲಮಿತಿ ಪದೋನ್ನತಿಯನ್ನು ನೀಡಲು ಮಂಜೂರಾತಿಯನ್ನು ನೀಡಿ ಮೇಲೆ ಕ್ರಮಾಂಕ (2) ರಲ್ಲಿ ಓದಲಾದಂತೆ ಸರ್ಕಾರಿ ಆದೇಶವನ್ನು ಹೊರಡಿಸಲಾಗಿತ್ತು.

ಈ ಹಿನ್ನೆಲೆಯಲ್ಲಿ, ಸರ್ಕಾರಿ ಆದೇಶ ಸಂಖ್ಯೆ:ಆಕುಕ 222 ಎಂಎಸ್ಎಸ್ 1990, ದಿನಾಂಕ: 19/7/1991 ರಲ್ಲಿ ನಮೂದಿಸಲ್ಪಟ್ಟಂತಹ ವೃಂದಬಲವನ್ನು ಪರಿಷ್ಕರಿಸಿ, ವೃಂದವಾರು ವೃಂದಬಲವನ್ನು ನಿಗದಿಪಡಿಸಿ ಹಾಗೂ 20 ವರ್ಷದ ಕಾಲಮಿತಿ ಮುಂಬಡ್ತಿ ಪದೋನ್ನತಿಯನ್ನು ನೇಮಕಾತಿ ಪ್ರಾಧಿಕಾರದ ಅನುಮೋದನೆಯೊಂದಿಗೆ ಹೊರಡಿಸತಕ್ಕದೆಂದು ತಿಳಿಸಿ, ಮೇಲೆ ಕ್ರಮಾಂಕ (3) ರಲ್ಲಿ ಓದಲಾದಂತೆ ಆದೇಶವನ್ನು ಹೊರಡಿಸಲಾಗಿದೆ.

ಈಗಾಗಲೇ 2012, 2013 ಮತ್ತು 2014 ನೇ ಸಾಲಿನಲ್ಲಿ ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರ ವೃಂದದ ಅಧಿಕಾರಿಗಳು 20 ವರ್ಷಗಳ ಕಾಲಮಿತಿ ಮುಂಬಡ್ತಿಗೆ ಅರ್ಹರಿದ್ದರೂ ಸಹ ಮುಂಬಡ್ತಿ ಪಡೆಯಲಾಗದೇ ವಯೋನಿವೃತ್ತಿ ಹೊಂದಿರುವ ಅಥವಾ ಹೊಂದಲಿರುವ ಹಿರಿಯ ತಜ್ಞರು/ಉಪ ಮುಖ್ಯ ವೈದ್ಯಾಧಿಕಾರಿ ವೃಂದದ ಅಧಿಕಾರಿಗಳಿಗೆ ದಿನಾಂಕ:1-1-2012 ರಿಂದ ಜಾರಿಗೆ ಬರುವಂತೆ ಅಥವಾ 20 ವರ್ಷಗಳ ಸೇವೆ ಪೂರ್ಣಗೊಂಡ ದಿನಾಂಕದಿಂದ, ಯಾವುದು ನಂತರವೋ ಆ ದಿನಾಂಕದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.38100-55200ರಲ್ಲಿ ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರು (ಆಯ್ಕೆ ಶ್ರೇಣಿ) ಎಂಬುದಾಗಿ ಪದನಾಮೀಕರಿಸಿ, 20 ವರ್ಷಗಳ 3ನೇ ಕಾಲಮಿತಿ ಮುಂಬಡ್ತಿಯನ್ನು ಮಂಜೂರು ಮಾಡಿ ಮೇಲೆ ಕ್ರಮಾಂಕ (4) ರಲ್ಲಿ ಓದಲಾದಂತೆ ಆದೇಶವನ್ನು ಹೊರಡಿಸಲಾಗಿರುತ್ತದೆ.

ಆಯುಕ್ತರು, ಮೇಲೆ ಕ್ರಮಾಂಕ (5) ರಲ್ಲಿ ಓದಲಾದ ಪತ್ರದಲ್ಲಿ, ಈಗಾಗಲೇ 6 ಮತ್ತು 13 ವರ್ಷಗಳ ಕಾಲಮಿತಿ ಮುಂಬಡ್ತಿ ಪಡೆದು, 20 ವರ್ಷಗಳ ಸೇವೆ ಸಲ್ಲಿಸಿದ 64 ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರುಗಳ ಪಟ್ಟಿಯೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಅವರುಗಳ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲವಾದ್ದರಿಂದ ದಿನಾಂಕ: 01-01-2012 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.38100-55200 ರ ಆಯ್ಕೆ ಶ್ರೇಣಿಯಲ್ಲಿ 20 ವರ್ಷಗಳ 3ನೇ ಕಾಲಮಿತಿ ಮುಂಬಡ್ತಿಯನ್ನು ಮಂಜೂರು ಮಾಡುವಂತೆ ಸರ್ಕಾರವನ್ನು ಕೋರಿದ್ದಾರೆ.

ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯ ಸಂದರ್ಭ ಹಾಗೂ ಸನ್ನಿವೇಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಈಗಾಗಲೇ ವಯೋನಿವೃತ್ತಿ ಹೊಂದಿದ ಅಥವಾ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಹಿರಿಯ ತಜ್ಞ ವೈದ್ಯರು/ಉಪ ಮುಖ್ಯ ವೈದ್ಯಾಧಿಕಾರಿ ವೃಂದದ ಅಧಿಕಾರಿಗಳಿಗೆ ವೇತನ ಶ್ರೇಣಿ ರೂ.38,100-55,200 ರ ಆಯ್ಕೆ ಶ್ರೇಣಿಯಲ್ಲಿ 20 ವರ್ಷಗಳ 3ನೇ ಕಾಲಮಿತಿ ಮುಂಬಡ್ತಿಯನ್ನು ಮಂಜೂರು ಮಾಡಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆಕುಕ 131 ಹೆಚ್ಎಸ್ಹೆಚ್ 2015, ಬೆಂಗಳೂರು, ದಿನಾಂಕ: 19-08-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ 20 ವರ್ಷಗಳ ಸೇವೆ ಸಲ್ಲಿಸಿ, 2012, 2013 ಮತ್ತು 2014 ನೇ ಸಾಲಿನಲ್ಲಿ ವಯೋನಿವೃತ್ತಿ ಹೊಂದಿದ ಅಥವಾ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಅನುಬಂಧದಲ್ಲಿನ 64 ಹಿರಿಯ ತಜ್ಞ ವೈದ್ಯರು/ಉಪ ಮುಖ್ಯ ವೈದ್ಯಾಧಿಕಾರಿ ವೃಂದದ ಅಧಿಕಾರಿಗಳಿಗೆ ದಿನಾಂಕ:01-01-2012 ರಿಂದ ಜಾರಿಗೆ ಬರುವಂತೆ ಅಥವಾ 20 ವರ್ಷಗಳ ಸೇವೆ ಪೂರ್ಣಗೊಂಡ ದಿನಾಂಕದಿಂದ, ಯಾವುದು ನಂತರವೂ ಆ ದಿನಾಂಕದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ.38100-55200 ರಲ್ಲಿ ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರು (ಆಯ್ಕೆ ಶ್ರೇಣಿ) ಎಂಬುದಾಗಿ ಪದನಾಮೀಕರಿಸಿ, 20 ವರ್ಷಗಳ 3ನೇ ಕಾಲಮಿತಿ ಮುಂಬಡ್ತಿಯನ್ನು ಮಂಜೂರು ಮಾಡಿದೆ.

ಸರ್ಕಾರಿ ಆದೇಶ ಸಂಖ್ಯೆ:ಆಕುಕ 222 ಎಂಎಸ್ಎಸ್ 1990, ದಿನಾಂಕ:19-7-1991 ರಲ್ಲಿ ನಿಗದಿಪಡಿಸಿರುವ ಇತರೇ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 44 ಎಸ್ಆರ್‌ಪಿ 2011, ದಿನಾಂಕ:31-12-2011ರಲ್ಲಿ ನೀಡಿರುವ ಸಹಮತಿ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಆಇ 01 ಟಿಎಫ್‌ಪಿ 1996, ದಿನಾಂಕ:1-7-1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)
ದೂರವಾಣಿ ಸಂಖ್ಯೆ: 080-2203 4306

**ಸರ್ಕಾರದ ಆದೇಶ ಸಂಖ್ಯೆ:ಆಕುಕ 131 ಹೆಚ್ಎಸ್ಹೆಚ್ 2015, ದಿನಾಂಕ: 19–08–2015ಕ್ಕೆ ಅನುಬಂಧ**

| ಕ್ರ ಸಂ. | ವೈದ್ಯರ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ವಿದ್ಯಾರ್ಹತೆ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | 20 ವರ್ಷದ ಕಾಲಮಿತಿ ಬಡ್ತಿಗೆ ಅರ್ಹ ದಿನಾಂಕ | ವೈದ್ಯಾಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದೆಯೇ/ಇಲ್ಲವೇ |
|---|---|---|---|---|---|---|
| 1 | ಡಾ: ಟಿ.ಎಸ್. ಪ್ರಭಾಕರ್, (ನಿ),<br>ಹಿರಿಯ ತಜ್ಞರು<br>ಸಾ.ಆಸ್ಪತ್ರೆ, ಜಯನಗರ, ಬೆಂಗಳೂರು | MS Ortho | 11.11.1959 | 28.02.1985 | 01.01.2012 | ಇಲ್ಲ |
| 2 | ಡಾ: ಪ್ರೇಮಾ .ಎಸ್. ಮೇಗೂರ (ನಿ)<br>ಹಿರಿಯ ತಜ್ಞರು<br>ನಗರ ಕು.ಕ.ಕೇಂದ್ರ, ವಿಭಾಗ–1<br>ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ | DGO | 01.06.1954 | 31.10.1983 | 01.01.2012 | ಇಲ್ಲ |
| 3 | ಡಾ: ಶಾಂತ .ಹೆಚ್.ಎಸ್ (ನಿ),<br>ಹಿರಿಯ ತಜ್ಞರು<br>ನಗರ ಕು.ಕ.ಕೇಂದ್ರ, ವಿಭಾಗ–1<br>ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ | MD DGO | 14.09.1954 | 08.11.1983 | 01.01.2012 | ಇಲ್ಲ |
| 4 | ಡಾ: ಆರ್.ಎಂ. ಸಜ್ಜನ್<br>ಜಿಲ್ಲಾ ಶಸ್ತ್ರ ಚಿಕಿತ್ಸಕರು<br>ಜಿಲ್ಲಾ ಆಸ್ಪತ್ರೆ, ವಿಜಯಪುರ | MS Ent | 01.10.1956 | 19.01.1984 | 01.01.2012 | ಇಲ್ಲ |
| 5 | ಡಾ: ಜಿ.ಸಂಪತ್‌ಕುಮಾರ್ (ನಿ)<br>ಜಿಲ್ಲಾ ಶಸ್ತ್ರ ಚಿಕಿತ್ಸಕರು<br>ಜಿಲ್ಲಾ ಆಸ್ಪತ್ರೆ, ಚಾಮರಾಜನಗರ ಜಿಲ್ಲೆ | MD GM | 27.05.1955 | 20.01.1984 | 01.01.2012 | ಇಲ್ಲ |
| 6 | ಡಾ: ಗೋವಿಂದರಾಜು<br>ಪ್ರಾಂಶುಪಾಲರು<br>ಜಿಲ್ಲಾ ತರಬೇತಿ ಕೇಂದ್ರ, ಮೈಸೂರು | Optho | 02.12.1954 | 21.01.1984 | 01.01.2012 | ಇಲ್ಲ |
| 7 | ಡಾ: ಆರ್. ರಘುನಂದನ್<br>ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ<br>ಜಯನಗರ, ಬೆಂಗಳೂರು | MBBS<br>MD GM | 19.01.1958 | 23.01.1984 | 01.01.2012 | ಇಲ್ಲ |
| 8 | ಡಾ: ಹೆಚ್.ವೈ. ಗೀತಾ<br>ಸಾ.ಆಸ್ಪತ್ರೆ, ಜಯನಗರ, ಬೆಂಗಳೂರು | MS OBG | 30.06.1956 | 20.08.1984 | 01.01.2012 | ಇಲ್ಲ |
| 9 | ಡಾ: ಎಸ್. ಸಿದ್ದೇಗೌಡ<br>ಆಡಳಿತ ವೈದ್ಯಾಧಿಕಾರಿಗಳು<br>ಸಾ.ಆಸ್ಪತ್ರೆ, ಮದ್ದೂರು, ಮಂಡ್ಯ ಜಿಲ್ಲೆ | MD GM | 01.06.1957 | 15.02.1985 | 01.01.2012 | ಇಲ್ಲ |
| 10 | ಡಾ: ಬಿ.ಎಸ್. ಲೋಕೇಶ<br>ಜಿಲ್ಲಾ ಶಸ್ತ್ರ ಚಿಕಿತ್ಸಕರು<br>ಜಿಲ್ಲಾ ಆಸ್ಪತ್ರೆ, ಕೊಪ್ಪಳ | MD Ane | 14.03.1958 | 25.02.1985 | 01.01.2012 | ಇಲ್ಲ |
| 11 | ಡಾ: ಜೆ.ಕೆ. ಮನ್ನನ್<br>ಹಿರಿಯ ತಜ್ಞರು<br>ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು | MS Ortho | 06.04.1957 | 01.03.1985 | 01.01.2012 | ಇಲ್ಲ |
| 12 | ಡಾ: ಗಂಜಾಳ ದಿಲೀಪಕುಮಾರ<br>ಹಿರಿಯ ತಜ್ಞರು, ಜಿಲ್ಲಾ ಆಸ್ಪತ್ರೆ<br>ವಿಜಯಪುರ | MS Ortho | 12.06.1958 | 01.03.1985 | 01.01.2012 | ಇಲ್ಲ |
| 13 | ಡಾ: ಭೀಮನಗೌಡ .ಎಸ್. ಪಾಟೀಲ<br>ಹಿರಿಯ ತಜ್ಞರು, ಜಿಲ್ಲಾ ಅಸ್ಪತ್ರೆ, ಗದಗ | MDGM | 01.06.1961 | 01.03.1985 | 01.01.2012 | ಇಲ್ಲ |
| 14 | ಡಾ: ಬಿ. ಮಂಜುನಾಥ್<br>ಹಿರಿಯ ತಜ್ಞರು, ಕೆ.ಸಿ.ಜನರಲ್ ಆಸ್ಪತ್ರೆ,<br>ಮಲ್ಲೇಶ್ವರಂ, ಬೆಂಗಳೂರು | MS Ortho | 22.02.1957 | 02.03.1985 | 01.01.2012 | ಇಲ್ಲ |

| ಕ್ರ ಸಂ. | ವೈದ್ಯರ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ವಿದ್ಯಾರ್ಹತೆ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | 20 ವರ್ಷದ ಕಾಲಮಿತಿ ಬಡ್ತಿಗೆ ಅರ್ಹ ದಿನಾಂಕ | ವೈದ್ಯಾಧಿಕಾರಿಗಳ ವಿರುದ್ದ ಇಲಾಖಾ ವಿಚಾರಣೆ ಬಾಕಿ ಇದೆಯೇ/ಇಲ್ಲವೇ |
|---|---|---|---|---|---|---|
| 15 | ಡಾ: ವಿ. ಗೋವಿಂದರಾಜುಲು<br>ಹಿರಿಯ ತಜ್ಞರು<br>ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು | MS Ent | 24.04.1957 | 02.03.1985 | 01.01.2012 | ಇಲ್ಲ |
| 16 | ಡಾ: ಸೌಭಾಗ್ಯವತಿ,<br>ಹಿರಿಯ ತಜ್ಞರು<br>ಸಾ.ಆಸ್ಪತ್ರೆ, ಹೊಸಪೇಟೆ, ಬಳ್ಳಾರಿ | MS Optho | 01.06.1959 | 02.03.1985 | 01.01.2012 | ಇಲ್ಲ |
| 17 | ಡಾ: ಬೆಣಚಿನಮರಡಿ .ಆರ್.ಎಸ್<br>ಹಿರಿಯ ತಜ್ಞರು,<br>ಸಾ.ಆ.ಗೋಕಾಕ, ಬೆಳಗಾವಿ ಜಿಲ್ಲೆ | MSGS | 01.10.1959 | 02.03.1985 | 01.01.2012 | ಇಲ್ಲ |
| 18 | ಡಾ: ವೀರಭದ್ರಯ್ಯ .ಎಸ್. ಮಠಪತಿ<br>ಹಿರಿಯ ತಜ್ಞರು, ಸಾ.ಆಸ್ಪತ್ರೆ,<br>ಬಸವಕಲ್ಯಾಣ, ಬೀದರ್ ಜಿಲ್ಲೆ | MS GS | 07.06.1957 | 16.03.1985 | 01.01.2012 | ಇಲ್ಲ |
| 19 | ಡಾ: ಕಿಶೋರ್ .ಸಿ. ಕುಮಟಾಕರ್<br>ಹಿರಿಯ ತಜ್ಞರು, ಸಾ.ಆಸ್ಪತ್ರೆ<br>ಜಯನಗರ, ಬೆಂಗಳೂರು | MD OBG | 30.03.1956 | 21.03.1985 | 01.01.2012 | ಇಲ್ಲ |
| 20 | ಡಾ: ಎಂ. ಮಂಜುಳಾ<br>ಹಿರಿಯ ತಜ್ಞರು, ಜಿಲ್ಲಾ ಶಸ್ತ್ರಚಿಕಿತ್ಸಕರು,<br>ಜಿಲ್ಲಾ ಆಸ್ಪತ್ರೆ, ಚಿಕ್ಕಬಳ್ಳಾಪುರ | MD Paed | 08.10.1959 | 09.08.1985 | 01.01.2012 | ಇಲ್ಲ |
| 21 | ಡಾ: ಹೆಚ್.ಡಿ. ನೀಲಾಂಬಿಕೆ<br>ವೈದ್ಯಕೀಯ ಅಧೀಕ್ಷಕರು<br>ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ | MBBS<br>MD OBG | 21.07.1959 | 20.12.1985 | 01.01.2012 | ಇಲ್ಲ |
| 22 | ಡಾ: ಅಶೋಕ .ಎಸ್. ತರಡಿ<br>ಹಿರಿಯ ತಜ್ಞರು,<br>ಜಿಲ್ಲಾ ಆಸ್ಪತ್ರೆ, ವಿಜಯಪುರ | MS GS | 28.03.1959 | 28.07.1986 | 01.01.2012 | ಇಲ್ಲ |
| 23 | ಡಾ: ಶರಣಪ್ಪ ಅಣ್ಣಪ್ಪ ಕಟ್ಟಿ<br>ಹಿರಿಯ ತಜ್ಞರು,<br>ಜಿಲ್ಲಾ ಆಸ್ಪತ್ರೆ, ಬಾಗಲಕೋಟೆ | MS GS | 22.07.1961 | 31.07.1986 | 01.01.2012 | ಇಲ್ಲ |
| 24 | ಡಾ: ಹೆಚ್. ರವಿಕುಮಾರ್,<br>ಹಿರಿಯ ತಜ್ಞರು, ಕೆ.ಸಿ.ಜನರಲ್ ಆಸ್ಪತ್ರೆ<br>ಮಲ್ಲೇಶ್ವರಂ, ಬೆಂಗಳೂರು | MS GS | 18.07.1961 | 01.08.1986 | 01.01.2012 | ಇಲ್ಲ |
| 25 | ಡಾ: ಪಿ.ವಿ. ಕೆಳಗೇರಿ<br>ಸಾ.ಆಸ್ಪತ್ರೆ, ಜಯನಗರ, ಬೆಂಗಳೂರು | MD GM | 10.10.1955 | 18.11.1986 | 01.01.2012 | ಇಲ್ಲ |
| 26 | ಡಾ: ಲಕ್ಷ್ಮೀನಾರಾಯಣ<br>ಸಾ.ಆಸ್ಪತ್ರೆ, ಜಯನಗರ, ಬೆಂಗಳೂರು | MBBS | 15.12.1954 | 25.11.1986 | 01.01.2012 | ಇಲ್ಲ |
| 27 | ಡಾ: ಕೆ. ರಮೇಶ<br>ಹಿರಿಯ ತಜ್ಞರು, ಸಾರ್ವಜನಿಕ ಆಸ್ಪತ್ರೆ,<br>ಜಯನಗರ, ಬೆಂಗಳೂರು | MD Ane | 24.06.1955 | 14.09.1987 | 01.01.2012 | ಇಲ್ಲ |
| 28 | ಡಾ: ಖಾಸಿಂಪಾಟೀಲ್ (ನಿವೃತ್ತ)<br>ಹಿರಿಯ ವೈದ್ಯಾಧಿಕಾರಿ,<br>ಸಾ.ಆಸ್ಪತ್ರೆ, ಸೇಡಂ, ಕಲಬುರ್ಗಿ ಜಿಲ್ಲೆ | MBBS | 11.03.1953 | 29.09.1987 | 01.01.2012 | ಇಲ್ಲ |

| ಕ್ರ ಸಂ. | ವೈದ್ಯರ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ವಿದ್ಯಾರ್ಹತೆ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | 20 ವರ್ಷದ ಕಾಲಮಿತಿ ಬಡ್ತಿಗೆ ಅರ್ಹ ದಿನಾಂಕ | ವೈದ್ಯಾಧಿಕಾರಿಗಳ ವಿರುದ್ದ ಇಲಾಖಾ ವಿಚಾರಣೆ ಬಾಕಿ ಇದೆಯೇ/ಇಲ್ಲವೇ |
|---|---|---|---|---|---|---|
| 29 | ಡಾ: ಎಂ.ಎಸ್. ತ್ರಿಪುಲಾಂಭ<br>ಹಿರಿಯ ತಜ್ಞರು,<br>ನಗರ ಕು.ಕ.ಕೇಂದ್ರ, ವಿಭಾಗ–3<br>ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ | MBBS<br>DGO | 20.07.1961 | 29.10.1987 | 01.01.2012 | ಇಲ್ಲ |
| 30 | ಡಾ: ರಮೇಶ್ ಕೌಲಗುಡ್<br>ಹಿರಿಯ ತಜ್ಞರು,<br>ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು | MS Ent | 22.07.1963 | 09.11.1987 | 01.01.2012 | ಇಲ್ಲ |
| 31 | ಡಾ: ಶಿವಾನಂದ .ಬಿ. ಸುರಗಾಳಿ<br>ಹಿರಿಯ ತಜ್ಞರು,<br>ಜಿಲ್ಲಾ ಆಸ್ಪತ್ರೆ, ಕಲಬುರ್ಗಿ | MBBS<br>MS GS | 15.06.1961 | 10.11.1987 | 01.01.2012 | ಇಲ್ಲ |
| 32 | ಡಾ:ರಮೇಶ್‌ಚಂದ್ರರೆಡ್ಡಿ .ವಿ<br>ಹಿರಿಯ ತಜ್ಞರು<br>ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು | MS GS | 09.04.1964 | 10.11.1987 | 01.01.2012 | ಇಲ್ಲ |
| 33 | ಡಾ: ಪ್ರಭು<br>ಹಿರಿಯ ತಜ್ಞರು<br>ಜಿಲ್ಲಾ ಆಸ್ಪತ್ರೆ, ವಿಜಾಪೂರ | MSGS | 05.08.1961 | 11.11.1987 | 01.01.2012 | ಇಲ್ಲ |
| 34 | ಡಾ: ಪಂಚಾಕ್ಷರಪ್ಪ .ವಿ. ಮರಗಿ<br>ಹಿರಿಯ ತಜ್ಞರು,<br>ಜಿಲ್ಲಾ ಆಸ್ಪತ್ರೆ, ಗದಗ | MD Ane | 10.06.1961 | 12.11.1987 | 01.01.2012 | ಇಲ್ಲ |
| 35 | ಡಾ: ಎಂ. ಕಿರಣ್‌ಕುಮಾರ್<br>ಹಿರಿಯ ತಜ್ಞರು,<br>ಸಾ.ಆಸ್ಪತ್ರೆ, ಜಯನಗರ, ಬೆಂಗಳೂರು | MS Ortho | 26.05.1963 | 13.11.1987 | 01.01.2012 | ಇಲ್ಲ |
| 36 | ಡಾ: ದಿವಾಕರ .ಎಲ್. ಮಾಳಿಗೆ<br>ಹಿರಿಯ ವೈದ್ಯರು,<br>ಸ.ಆ.ಕೇಂದ್ರ, ಸೈದಾಪುರ<br>ಯಾದಗಿರಿ ತಾ: ಮತ್ತು ಜಿಲ್ಲೆ | MBBS | 07.11.1960 | 04.01.1988 | 01.01.2012 | ಇಲ್ಲ |
| 37 | ಡಾ: ಪ್ರೇಯಕುಮಾರ್<br>ಹಿರಿಯ ತಜ್ಞರು<br>ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು | DMRD | 09.05.1958 | 20.08.1988 | 01.01.2012 | ಇಲ್ಲ |
| 38 | ಡಾ: ವಿಜಯಾ ಬಿ. ಬಿರಾದಾರ<br>ಹಿರಿಯ ತಜ್ಞರು<br>ಜಿಲ್ಲಾ ಆಸ್ಪತ್ರೆ, ವಿಜಾಪೂರ | DGO | 28.01.1964 | 26.08.1988 | 01.01.2012 | ಇಲ್ಲ |
| 39 | ಡಾ: ಎ.ಕೆ. ಪ್ರಮೀಳ<br>ಹಿರಿಯ ತಜ್ಞರು<br>ಸಾ.ಆಸ್ಪತ್ರೆ, ಜಯನಗರ, ಬೆಂಗಳೂರು | MS OBG | 19.06.1960 | 03.09.1988 | 01.01.2012 | ಇಲ್ಲ |
| 40 | ಡಾ: ಎಸ್.ಆರ್. ಲಕ್ಷ್ಮೀಪತಿ<br>ಹಿರಿಯ ತಜ್ಞರು<br>ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು | MD Pead | 17.07.1966 | 15.07.1991 | 01.01.2012 | ಇಲ್ಲ |
| 41 | ಡಾ: ಎಂ.ಎಸ್. ನಾಗೇಂದ್ರ<br>ಹಿರಿಯ ತಜ್ಞರು, ಹಾಸನ ಇನ್‌ಸ್ಟ್ಯೂಟ್<br>ಆಫ್ ಮೆಡಿಕಲ್ ಸೈನ್ಸ್, ಹಾಸನ | MDRT | 28.02.1965 | 17.07.1991 | 01.01.2012 | ಇಲ್ಲ |

| ಕ್ರ ಸಂ. | ವೈದ್ಯರ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ವಿದ್ಯಾರ್ಹತೆ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | 20 ವರ್ಷದ ಕಾಲಮಿತಿ ಬಡ್ತಿಗೆ ಅರ್ಹ ದಿನಾಂಕ | ವೈದ್ಯಾಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದೆಯೇ/ಇಲ್ಲವೇ |
|---|---|---|---|---|---|---|
| 42 | ಡಾ: ಅಮೃತೇಶ್ವರಿ<br>ಹಿರಿಯ ತಜ್ಞರು<br>ಸಾ.ಆಸ್ಪತ್ರೆ, ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ | OBG | 27.06.1963 | 20.07.1991 | 01.01.2012 | ಇಲ್ಲ |
| 43 | ಡಾ: ಕೆ. ಸೌಮ್ಯ<br>ಹಿರಿಯ ತಜ್ಞರು<br>ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು | MS Optho | 24.06.1966 | 20.07.1991 | 01.01.2012 | ಇಲ್ಲ |
| 44 | ಡಾ: ಸಿ.ಎಂ. ಮುರಳೀಧರ<br>ಹಿರಿಯ ತಜ್ಞರು<br>ಸಾ.ಆಸ್ಪತ್ರೆ, ಕೆ.ಆರ್.ಪುರಂ<br>ಬೆಂಗಳೂರು ಪೂರ್ವ, ಬೆಂಗಳೂರು | DLO<br>MS ENT | 01.06.1964 | 22.07.1991 | 01.01.2012 | ಇಲ್ಲ |
| 45 | ಡಾ: ಮುನಝು ಫಾತಿಮ<br>ಹಿರಿಯ ತಜ್ಞರು<br>ತಾಲ್ಲೂಕು ಆಸ್ಪತ್ರೆ, ದೇವನಹಳ್ಳಿ<br>ಬೆಂಗಳೂರು (ಗ್ರಾ) ಜಿಲ್ಲೆ | MS OBG | 27.03.1962 | 23.07.1991 | 01.01.2012 | ಇಲ್ಲ |
| 46 | ಡಾ: ಜಿ.ವಿ. ನಾಗರಾಜಮೂರ್ತಿ<br>ಹಿರಿಯ ತಜ್ಞರು<br>ಸಾಂಕ್ರಾಮಿಕ ರೋಗಗಳ ಆಸ್ಪತ್ರೆ<br>ಮೈಸೂರು | DCH | 25.06.1962 | 25.07.1991 | 01.01.2012 | ಇಲ್ಲ |
| 47 | ಡಾ: ಹರಿಣಿ .ಕೆ.ಎನ್<br>ಉಪಮುಖ್ಯ ವೈದ್ಯಾಧಿಕಾರಿ<br>ಜಿಲ್ಲಾ ಆಸ್ಪತ್ರೆ, ಮಡಿಕೇರಿ | MBBS | 15.02.1964 | 25.07.1991 | 01.01.2012 | ಇಲ್ಲ |
| 48 | ಡಾ: ಎಂ. ಪಶುಪತಿ<br>ಹಿರಿಯ ತಜ್ಞರು<br>ಜಿಲ್ಲಾ ಶಸ್ತ್ರಚಿಕಿತ್ಸಕರು, ಮೈಸೂರು<br>ಜಿಲ್ಲಾ ಶಸ್ತ್ರಚಿಕಿತ್ಸಕರ ಕಛೇರಿ<br>ತಿಲಕ್‌ನಗರ, ಮೈಸೂರು | MS GS | 01.04.1959 | 31.07.1991 | 01.01.2012 | ಇಲ್ಲ |
| 49 | ಡಾ: ಕೃಷ್ಣಮೂರ್ತಿ<br>ಹಿರಿಯ ತಜ್ಞರು<br>ಸ.ಆ.ಕೇಂದ್ರ, ಬೆಳ್ಳೂರು<br>ನಾಗಮಂಗಲ ತಾ: ಮಂಡ್ಯ ಜಿಲ್ಲೆ | MBBS | 10.02.1962 | 01.08.1991 | 01.01.2012 | ಇಲ್ಲ |
| 50 | ಡಾ: ಬಿ.ಆರ್. ವೆಂಕಟೇಶಯ್ಯ<br>ಹಿರಿಯ ತಜ್ಞರು<br>ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು | MS Ortho | 08.06.1964 | 02.08.1991 | 01.01.2012 | ಇಲ್ಲ |
| 51 | ಡಾ: ರಾಮಕೃಷ್ಣಪ್ಪ<br>ಹಿರಿಯ ತಜ್ಞರು<br>ಸಾ.ಆಸ್ಪತ್ರೆ, ಕೆ.ಆರ್.ಪುರಂ<br>ಬೆಂಗಳೂರು ಪೂರ್ವ, ಬೆಂಗಳೂರು | MS GS | 28.05.1965 | 12.08.1991 | 01.01.2012 | ಇಲ್ಲ |
| 52 | ಡಾ: ಬಿ.ಎಂ.ಸುಧಾ<br>ಹಿರಿಯ ತಜ್ಞರು<br>ಸಾ.ಆಸ್ಪತ್ರೆ, ಜಯನಗರ, ಬೆಂಗಳೂರು | DA | 19.11.1966 | 12.08.1991 | 01.01.2012 | ಇಲ್ಲ |

| ಕ್ರ ಸಂ. | ವೈದ್ಯರ ಹೆಸರು ಮತ್ತು ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳ | ವಿದ್ಯಾರ್ಹತೆ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | 20 ವರ್ಷದ ಕಾಲಮಿತಿ ಬಡ್ತಿಗೆ ಅರ್ಹ ದಿನಾಂಕ | ವೈದ್ಯಾಧಿಕಾರಿಗಳ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದೆಯೇ/ಇಲ್ಲವೇ |
|---|---|---|---|---|---|---|
| 53 | ಡಾ: ಬಿ.ಎನ್. ರವೀಂದ್ರ<br>ಹಿರಿಯ ತಜ್ಞರು, ಜಿಲ್ಲಾ ಆಸ್ಪತ್ರೆ<br>ಚಿಕ್ಕಬಳ್ಳಾಪುರ | MD Radio | 15.04.1962 | 11.09.1991 | 01.01.2012 | ಇಲ್ಲ |
| 54 | ಡಾ: ನರಸಿಂಹಯ್ಯ<br>ಹಿರಿಯ ತಜ್ಞರು<br>ತಾಲ್ಲೂಕು ಆರೋಗ್ಯಾಧಿಕಾರಿಗಳು<br>ನೆಲಮಂಗಲ, ಬೆಂಗಳೂರು (ಗ್ರಾ) | DMRD | 06.09.1962 | 29.09.1991 | 01.01.2012 | ಇಲ್ಲ |
| 55 | ಡಾ: ಹೆಚ್. ಪದ್ಮಾವತಿ<br>ಹಿರಿಯ ತಜ್ಞರು, ಸಾ.ಆಸ್ಪತ್ರೆ<br>ಟಿ.ನರಸೀಪುರ, ಮೈಸೂರು ಜಿಲ್ಲೆ | DMRD | 12.08.1966 | 15.10.1991 | 01.01.2012 | ಇಲ್ಲ |
| 56 | ಡಾ: ಭಗವಂತ ಅನ್ವರ<br>ಹಿರಿಯ ತಜ್ಞರು,<br>ಜಿಲ್ಲಾ ಆಸ್ಪತ್ರೆ, ಯಾದಗಿರಿ | MBBS | 01.06.1962 | 21.10.1991 | 01.01.2012 | ಇಲ್ಲ |
| 57 | ಡಾ: ಎಂ. ಸುರೇಂದ್ರ<br>ಹಿರಿಯ ತಜ್ಞರು<br>ಕೆ.ಸಿ.ಜನರಲ್ ಆಸ್ಪತ್ರೆ, ಬೆಂಗಳೂರು | MD Ane | 20.6.1965 | 09.11.1991 | 01.01.2012 | ಇಲ್ಲ |
| 58 | ಡಾ॥ ಲತಾ.ಎಸ್,<br>ಉಪ ನಿರ್ದೇಶಕರು, ಪಿಪಿಪಿ,<br>ಕೆ.ಹೆಚ್.ಎಸ್.ಡಿ.ಆರ್.ಪಿ. ಬೆಂಗಳೂರು | MBBS<br>DCH | 21.08.1960 | 05.11.1987 | 01.01.2012 | ಇಲ್ಲ |
| 59 | ಡಾ॥ ಎಸ್.ಬಿ. ಕಟಕೋಳ, (ನಿ)<br>ಜಂಟಿ ನಿರ್ದೇಶಕರು, (ಕ್ಷಯ) | MD(GM) | 05.04.1955 | 14.10.1982 | 01.01.2012 | ಇಲ್ಲ |
| 60 | ಡಾ॥ ವಿಮಲಾ ಆರ್.ಪಾಟೀಲ್<br>ಜಂಟಿ ನಿರ್ದೇಶಕರು (ಲೆಪ್ರಸಿ),<br>ಆಕುಕ ಸೇವೆಗಳು, ಬೆಂಗಳೂರು | MBBS,<br>DGO | 16.07.1956 | 20.08.1980 | 01.01.2012 | ಇಲ್ಲ |
| 61 | ಡಾ॥ ಪರಿಮಳಾ ಎಸ್.ಮರೂರ್<br>ಉಪ ನಿರ್ದೇಶಕರು, (ಇಎಂಆರ್‌ಐ)<br>ಆಕುಕ ಸೇವೆಗಳು, ಬೆಂಗಳೂರು | MBBS<br>DPH | 14.06.1963 | 11.01.1988 | 01.01.2012 | ಇಲ್ಲ |
| 62 | ಡಾ॥ ಅನ್ಸರ್ ಅಹ್ಮದ್ .ಎಂ<br>ಜಿಲ್ಲಾ ಶಸ್ತ್ರ ಚಿಕಿತ್ಸಕರು/ಆಡಳಿತ<br>ವೈದ್ಯಾಧಿಕಾರಿ, ಸಾಂಕ್ರಾಮಿಕ ರೋಗಗಳ<br>ಆಸ್ಪತ್ರೆ, ಬೆಂಗಳೂರು | MBBS<br>DMRD | 02.04.1965 | 20.07.1991 | 01.01.2012 | ಇಲ್ಲ |
| 63 | ಡಾ॥ ಜಿ.ಎಂ. ವಾಮದೇವ.<br>ಉಪ ನಿರ್ದೇಶಕರು (ಪೌಷ್ಟಿಕ)<br>ಆಕುಕ ಸೇವೆಗಳ ನಿರ್ದೇಶನಾಲಯ,<br>ಬೆಂಗಳೂರು | MD GM | 18.06.1956 | 23.01.1984 | 01.01.2012 | ಇಲ್ಲ |
| 64 | ಡಾ॥ ಡಿ.ಬಿ. ಚೆನ್ನಶೆಟ್ಟಿ, (ನಿ)<br>ಹಿರಿಯ ತಜ್ಞರು<br>ಜಿಲ್ಲಾ ಆರೋಗ್ಯ ಮತ್ತು ಕುಟುಂಬ<br>ಕಲ್ಯಾಣಾಧಿಕಾರಿ, ಗದಗ | DGO | 14.09.1954 | 28.02.1985 | 01.01.2012 | ಇಲ್ಲ |

**ಬಿ.ಎಸ್. ನಾಗರಾಜ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೪) (೫೦೦ ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ – II | ಬೆಂಗಳೂರು, ಗುರುವಾರ, ಆಗಸ್ಟ್ ೧೩, ೨೦೧೫ (ಶ್ರಾವಣ ೨೨, ಶಕ ವರ್ಷ ೧೯೩೭) | ನಂ. ೯೧೮ |
|---|---|---|
| Part – II | Bengaluru, Thursday, August 13, 2015 (Shravana 22, Shaka Varsha 1937) | No. 918 |



ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಹಿಂವಕ 262 ಬಿಸಿಎ 2015, ಬೆಂಗಳೂರು, ದಿನಾಂಕ: 29.07.2015**

ಅಧಿಸೂಚನೆ ಸಂಖ್ಯೆ:ಸಿಆಸುಇ 146 ಆಸೇವ 2015 ದಿನಾಂಕ:24.07.2015ರಲ್ಲಿ ಡಾ॥ ಎಂ.ಆರ್.ಏಕಾಂತಪ್ಪ, ಅಪರ ಮುಖ್ಯಸ್ಥರು, ಗ್ರಾಮಸ್ವರಾಜ್ ಯೋಜನೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರನ್ನು ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇಲ್ಲಿ ಖಾಲಿ ಇರುವ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ ನೇಮಿಸಲು ಸದರಿಯವರ ಸೇವೆಯನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ವಶಕ್ಕೆ ನೀಡಲಾಗಿದೆ.

ಈ ಹಿನ್ನೆಲೆಯಲ್ಲಿ ಡಾ॥ ಎಂ.ಆರ್.ಏಕಾಂತಪ್ಪ, ಅಪರ ಮುಖ್ಯಸ್ಥರು, ಗ್ರಾಮಸ್ವರಾಜ್ ಯೋಜನೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರನ್ನು ಡಿ.ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇಲ್ಲಿ ಖಾಲಿ ಇರುವ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಮರುಸ್ಥಳ ನಿಯುಕ್ತಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಬಾನೊಳ್ಳಿ**
ಸರ್ಕಾರದ ಅಧೀನ ಕಾರ್ಯದರ್ಶಿ–1 (ಪ್ರ),
ಹಿಂದುಳಿದ ವರ್ಗಗಳಕಲ್ಯಾಣ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೩) (೧೦೦ ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ - III | ಬೆಂಗಳೂರು, ಮಂಗಳವಾರ, ಆಗಸ್ಟ್ ೦೪, ೨೦೧೫ (ಶ್ರಾವಣ ೧೩, ಶಕ ವರ್ಷ ೧೯೩೭) | ನಂ. ೯೦೨ |
|---|---|---|
| *Part - III* | *Bengaluru, Tuesday, August 04, 2015 (Shravana 13, Shaka Varsha 1937)* | *No. 902* |

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 124 ಎಂಎಲ್‌ಆರ್ 2015, ಬೆಂಗಳೂರು, ದಿನಾಂಕ: 03-08-2015**

1979ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ (ಚುನಾವಣೆ) ನಿಯಮಾವಳಿಯ 68ನೇ ನಿಯಮದೊಂದಿಗೆ ಓದಲಾದ 1976ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ನಿಯಮಗಳ ಅಧಿನಿಯಮ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ:14)ರ 32ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ದಿನಾಂಕ: 29-07-2015 ರಂದು ನಡೆದ ಚುನಾವಣೆಯಲ್ಲಿ ವಿಜಯಪುರ ಮಹಾನಗರ ಪಾಲಿಕೆಗೆ ಮಹಾಪೌರ / ಉಪಮಹಾಪೌರರ ಆಗಿ ಈ ಕೆಳಕಂಡ ಅಭ್ಯರ್ಥಿಗಳು ಆಯ್ಕೆಯಾಗಿದ್ದು, ಸದರಿ ಅಭ್ಯರ್ಥಿಗಳ ಹೆಸರನ್ನು ಈ ಮೂಲಕ ಸಾರ್ವಜನಿಕ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| *ಕ್ರ.ಸಂ* | *ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ* |
|---|---|
| | **ಮಹಾಪೌರ ಸ್ಥಾನಕ್ಕೆ** |
| 1 | ಶ್ರೀಮತಿ ಸಂಗೀತಾ ಸಂತೋಷ ಪೋಳ<br>ಶಿವುನಗರ, ಸ್ವಾತಂತ್ರ್ಯ ಯೋಧರ ಕಾಲನಿ,<br>ಅಥಣಿ ರೋಡ್, ವಿಜಯಪುರ |
| | **ಉಪ ಮಹಾಪೌರ ಸ್ಥಾನಕ್ಕೆ** |
| 2 | ಶ್ರೀಮತಿ ಲಕ್ಷ್ಮೀ ಬಾಗಪ್ಪ ಕನ್ನೊಳ್ಳಿ<br>ಕಾಳಿಕಾನಗರ ಆಶ್ರಮ ರೋಡ್, ವಿಜಯಪುರ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ಧಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೪) (೨೦೦ ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ - III | ಬೆಂಗಳೂರು, ಬುಧವಾರ, ಆಗಸ್ಟ್ ೦೫, ೨೦೧೫ (ಶ್ರಾವಣ ೧೪, ಶಕ ವರ್ಷ ೧೯೩೭) | ನಂ. ೯೦೫ |
|---|---|---|
| Part - III | Bengaluru, Wednesday, August 05, 2015 (Shravana 14, Shaka Varsha 1937) | No. 905 |



ನಗರಾಭಿವೃದ್ಧಿ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ನಅಇ 29 ಎಂಎಲ್‌ಆರ್ 2015, ಬೆಂಗಳೂರು, ದಿನಾಂಕ: 05-08-2015**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 9ನೇ ಪ್ರಕರಣದಲ್ಲಿ ಅಗತ್ಯಪಡಿಸಿದಂತೆ ರಾಮನಗರ ಜಿಲ್ಲೆಯ ಬಿಡದಿ ಗ್ರಾಮ ಪಂಚಾಯಿತಿಯ ಬಿಡದಿ ಮತ್ತು ಬಾನಂದೂರು ಗ್ರಾಮಗಳು, ಬನ್ನಿಕುಪ್ಪೆ (ಬಿ) ಗ್ರಾಮ ಪಂಚಾಯಿತಿಯ ಕೇತಿಗಾನಹಳ್ಳಿ ಮತ್ತು ಅವರಗೆರೆ ಗ್ರಾಮಗಳು, ಕೆಂಚನಕುಪ್ಪೆ ಗ್ರಾಮ ಪಂಚಾಯಿತಿಯ ಕೆಂಚನಕುಪ್ಪೆ, ಕಲ್ಲುಗೋಪಹಳ್ಳಿ, ಉಲ್ಲಾರ್ ಹೊಸದೊಡ್ಡಿ ಮತ್ತು ಮುದ್ದಾಪುರ ಕರೇನಹಳ್ಳಿ ಗ್ರಾಮಗಳು ಹಾಗೂ ಇಟ್ಟುಮಡು ಗ್ರಾಮ ಪಂಚಾಯಿತಿಯ ಇಟ್ಟುಮಡು, ಅಬ್ಬನಕುಪ್ಪೆ ಮತ್ತು ಹೆಗ್ಗಡಗೆರೆ ಗ್ರಾಮಗಳ ಪ್ರದೇಶಗಳನ್ನು 'ಬಿಡದಿ ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಬಿಡದಿ ಪುರಸಭೆ'ಯ ಪ್ರದೇಶವೆಂದು ನಿರ್ದಿಷ್ಟಪಡಿಸಲು ಪ್ರಸ್ತಾಪಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 29 ಎಂಎಲ್‌ಆರ್ 2015, ದಿನಾಂಕ 30.04.2015'ನ್ನು ದಿನಾಂಕ 30.04.2015ರ ಕರ್ನಾಟಕ ವಿಶೇಷ ರಾಜ್ಯ ಪತ್ರದ ಭಾಗ-3ರ ಸಂಖ್ಯೆ: 403 ರಲ್ಲಿ ಪ್ರಕಟಿಸಿ, ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿ;

ಸದರಿ ರಾಜ್ಯ ಪತ್ರವನ್ನು ಪ್ರಕಟಿಸಿದ ದಿನಾಂಕದಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿ;

ನಿಗದಿತ ಅವಧಿಯಲ್ಲಿ ಸ್ವೀಕೃತವಾದ ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿರುವುದರಿಂದ;

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 3 ನೇ ಪ್ರಕರಣದೊಂದಿಗೆ ಓದಿಕೊಂಡ 357 ನೇ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ, 'ಅನುಸೂಚಿ ಎ' ಮತ್ತು 'ಅನುಸೂಚಿ ಬಿ' ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ರಾಮನಗರ ಜಿಲ್ಲೆಯ ಬಿಡದಿ ಗ್ರಾಮ ಪಂಚಾಯಿತಿಯ ಬಿಡದಿ ಮತ್ತು ಬಾನಂದೂರು ಗ್ರಾಮಗಳು, ಬನ್ನಿಕುಪ್ಪೆ (ಬಿ) ಗ್ರಾಮ ಪಂಚಾಯಿತಿಯ ಕೇತಿಗಾನಹಳ್ಳಿ ಮತ್ತು ಅವರಗೆರೆ ಗ್ರಾಮಗಳು, ಕೆಂಚನಕುಪ್ಪೆ ಗ್ರಾಮ ಪಂಚಾಯಿತಿಯ ಕೆಂಚನಕುಪ್ಪೆ, ಕಲ್ಲುಗೋಪಹಳ್ಳಿ, ಉಲ್ಲಾರ್ ಹೊಸದೊಡ್ಡಿ ಮತ್ತು ಮುದ್ದಾಪುರ ಕರೇನಹಳ್ಳಿ ಗ್ರಾಮಗಳು ಹಾಗೂ ಇಟ್ಟುಮಡು ಗ್ರಾಮ ಪಂಚಾಯಿತಿಯ ಇಟ್ಟುಮಡು, ಅಬ್ಬನಕುಪ್ಪೆ ಮತ್ತು ಹೆಗ್ಗಡಗೆರೆ ಗ್ರಾಮಗಳ ಪ್ರದೇಶಗಳನ್ನು 'ಬಿಡದಿ ಸಣ್ಣ ನಗರ ಪ್ರದೇಶ'ವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು 'ಬಿಡದಿ ಪುರಸಭೆ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ, ರಾಜ್ಯಪತ್ರದಲ್ಲಿ ಪ್ರಕಟಿಸಲಾದ ದಿನಾಂಕದಿಂದ ಜಾರಿಗೆ ಬರುವಂತೆ ಈ ಮೂಲಕ ಉದ್ಘೋಷಿಸಿರುತ್ತಾರೆ-

1. ಅಂಥ ಪ್ರದೇಶದ ಜನಸಂಖ್ಯೆ ಇಪ್ಪತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಮೂರು ಲಕ್ಷಕ್ಕಿಂತ ಹೆಚ್ಚಿಲ್ಲದ ಹೊರತು;
2. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ಒಂದು ಸಾವಿರದ ಐನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು;
3. ಹಿಂದಿನ ನಿಕಟಪೂರ್ವ ಜನಗಣತಿಯಲ್ಲಿ ಅಂಥ ಪ್ರದೇಶದಿಂದ ಸ್ಥಳೀಯ ಆಡಳಿತಕ್ಕಾಗಿ ತೆರಿಗೆ ಮತ್ತು ತೆರಿಗೆಯಿಲ್ಲದ ಇತರ ಸಂಪನ್ಮೂಲಗಳಿಂದ ಉತ್ಪಾದಿತವಾದ ರಾಜಸ್ವ ವಾರ್ಷಿಕ ಒಂಭತ್ತು ಲಕ್ಷ ಅಥವಾ ವಾರ್ಷಿಕ ತಲಾ ಒಬ್ಬನಿಗೆ ನಲವತ್ತೈದು ರೂ.ಗಳ ದರದಂತೆ ಲೆಕ್ಕ ಹಾಕಲಾದ ಮೊತ್ತ ಇವೆರಡರಲ್ಲಿ ಯಾವುದು ಹೆಚ್ಚೋ ಆ ಮೊತ್ತಕ್ಕಿಂತ ಕಡಿಮೆಯಿರದ ಹೊರತು;
4. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು;

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**ಅನುಸೂಚಿ-ಎ**

**ಬಿಡದಿ ಗ್ರಾಮ ಪಂಚಾಯಿತಿ**

1) ಬಿಡದಿ 2) ಬಾನಂದೂರು (ಗೊಲ್ಲಹಳ್ಳಿ, ಮೇಡನಹಳ್ಳಿ, ಜೋಗದದೊಡ್ಡಿ, ಭೈರವನದೊಡ್ಡಿ)

**ಬನ್ನಿಕುಪ್ಪೆ (ಬಿ) ಗ್ರಾಮ ಪಂಚಾಯಿತಿ**

1) ಕೇತಿಗಾನಹಳ್ಳಿ, 2) ಅವರಗೆರೆ

**ಕೆಂಚನಕುಪ್ಪೆ ಗ್ರಾಮ ಪಂಚಾಯಿತಿ**

1) ಕೆಂಚನಕುಪ್ಪೆ (ದಾಖಲೆ ಗ್ರಾಮಗಳಾದ ಕೆಂಚನಕುಪ್ಪೆ, ಜನತಾ ಕಾಲೋನಿ, ತಮ್ಮದ ದೊಡ್ಡಿ, ಹಲಸಿನ ಮರದ ದೊಡ್ಡಿ, ಕರಿಯಪ್ಪನ ದೊಡ್ಡಿ, ಚಂದ್ರರಾಯರದೊಡ್ಡಿ)
2) ಕಲ್ಲುಗೋಪಹಳ್ಳಿ (ದಾಖಲೆ ಗ್ರಾಮಗಳಾದ ದಾಸಪ್ಪನದೊಡ್ಡಿ, ರಾಮಕೃಷ್ಣಪ್ಪನ ದೊಡ್ಡಿ)
3) ಹುಲ್ತಾರ್ ಹೊಸದೊಡ್ಡಿ
4) ಮುದ್ದಪುರದ ಕರೇನಹಳ್ಳಿ (ದಾಖಲೆ ಗ್ರಾಮಗಳಾದ ಶೆಟ್ಟಿಗೌಡನ ದೊಡ್ಡಿ, ನರಸೇಗೌಡನ ದೊಡ್ಡಿ, ಹುಚ್ಚಮ್ಮನದೊಡ್ಡಿ)

**ಇಟ್ಟುಮಡು ಗ್ರಾಮ ಪಂಚಾಯಿತಿ**

**1)** ಅಬ್ಬನಕುಪ್ಪೆ (ದಾಖಲೆ ಗ್ರಾಮಗಳಾದ ವೃಷಭಾವತಿ ಪುರ, ಅಬ್ಬನಕುಪ್ಪೆ ಕಾಲೋನಿ)
**2)** ಇಟ್ಟುಮಡು (ದಾಖಲೆ ಗ್ರಾಮಗಳಾದ ತೋರೆದೊಡ್ಡಿ, ತಿಮ್ಮೆಗೌಡನ ದೊಡ್ಡಿ)
**3)** ಹೆಗ್ಗಡಗೆರೆ (ದಾಖಲೆ ಗ್ರಾಮಗಳಾದ ಅಂಗರಹಳ್ಳಿ, ಹೆಗ್ಗಡಗೆರೆ ಕಾಲೋನಿ)

**ಅನುಸೂಚಿ-ಬಿ**

**ಪೂರ್ವಕ್ಕೆ –** ಬಿಡದಿ ಗ್ರಾಮದ ಸ.ನ. 20 ಪ್ರಾರಂಭಗೊಂಡು ಬೆಂಗಳೂರು ಮೈಸೂರು ರಸ್ತೆ ಹಾದು ಹೋಗಿ ಸ.ನ. 21, 26 ಮೂಲಕ ಬಾನಂದೂರು ಗ್ರಾಮದ ಸ.ನ. 94, 109, 106, 111, 186 ಕ್ಕೆ ಕೊನೆಗೊಂಡು ಅಬ್ಬನಕುಪ್ಪೆ ಸ.ನ. 20, 21, ರಿಂದ ಪ್ರಾರಂಭವಾಗಿ 135 ಮತ್ತು 32 ಕ್ಕೆ ತಲುಪಿ ಬಿಡದಿ ಬೈರಮಂಗಲ ರಸ್ತೆ ತಲುಪುತ್ತದೆ.

**ದಕ್ಷಿಣಕ್ಕೆ –** ಪೂರ್ವಾಭಿಮುಖದಿಂದ ದಕ್ಷಿಣದ ಕಡೆ ಅಬ್ಬನಕುಪ್ಪೆ ಸ.ನ. 137 ರಿಂದ ಪ್ರಾರಂಭಗೊಂಡು 44, 49, 50, 52 ಕ್ಕೆ ಅಬ್ಬನಕುಪ್ಪೆ ಸ.ನ. ಕೊನೆಗೊಂಡು ಇಟ್ಟುಮಡು ಗ್ರಾಮ ಸ.ನ. 119, 117, 116, 107, 106, 176, 177, 149, 103, 99, 96, 95, 66, 213, 199, 197, 192, 191 ಕ್ಕೆ ದಕ್ಷಿಣ ದಿಕ್ಕು ಕೊನೆಗೊಳ್ಳುತ್ತದೆ.

**ಪಶ್ಚಿಮಕ್ಕೆ -** ದಕ್ಷಿಣದಿಂದ ಪಶ್ಚಿಮಾಭಿಮುಖವಾಗಿ ಇಟ್ಟುಮಡು ಗ್ರಾಮ ಸ. ನ. 187, 186, 185 ತಲುಪಿ ಉರಗಳ್ಳಿ ರಸ್ತೆ ಹಾದು ಹೆಗ್ಗಡಗೆರೆ ಗಡಿ ತಲುಪಿ ಹೆಗ್ಗಡಗೆರೆ ಸ.ನ. 148, 149, 153, 157, 158, 162, 243, 234, 231, 232, 171, 172, 173, 206, 205, 204, 6, 7, 8, 9, 12, 215, 216, 217, 218 ತಲುಪಿ ಕಲ್ಲುಗೋಪಹಳ್ಳಿ ಗಡಿ ಸೇರಿ ಸ.ನ. 21ರ ಮುಖಾಂತರ ಬೆಂಗಳೂರು ಮೈಸೂರು ಹೆದ್ದಾರಿ ಹಾದು ಸ.ನ. 33, 36, ಮತ್ತು 1 ಕ್ಕೆ ತಲುಪಿ ಕೆಂಚನಕುಪ್ಪೆ ಗಡಿ ತಲುಪಿ ಸ.ನ. 127 ರ ಮುಖಾಂತರ ಮುದ್ದಾಪುರ ಕರೇನಹಳ್ಳಿ ಗಡಿ ತಲುಪಿ ಸ.ನ. 58, 59, 135, 126, 125, 124 ಕ್ಕೆ ಪಶ್ಚಿಮ ದಿಕ್ಕು ಕೊನೆಗೊಳ್ಳುತ್ತದೆ.

**ಉತ್ತರಕ್ಕೆ –** ಪಶ್ಚಿಮ ದಿಕ್ಕಿನಿಂದ ಉತ್ತರಾಭಿಮುಖವಾಗಿ ಮುದ್ದಾಪುರ ಕರೇನಹಳ್ಳಿ ಸ.ನ. 63, 64, 73, 115, 112, 74, 75, 76, 77, 78, 79, 80, 82, 83 ರ ಮುಖಾಂತರ ನಲ್ಲಿಗುಡ್ಡೆ ಕೆರೆಳಗೊಂಡು ಅವರಗೆರೆ ಗಡಿ ತಲುಪಿ ಅವರಗೆರೆ ಸ.ನ. 50, 54, 56 ತಲುಪಿ ಬನ್ನಿಕುಪ್ಪೆ ರಸ್ತೆ ಹಾದು ಸ.ನ. 57, ಮುಖಾಂತರ ಸ.ನ. 60, 61, 4, 6, 7, 8, 9, 10 ರ ಮುಖಾಂತರ ಕೇತಿನಗಾನಹಳ್ಳಿ ತಲುಪಿ ಕೇತಿಗಾನಹಳ್ಳಿ ಸ.ನ. 40, 41, 42, 43, 44, 6, 49, 7, 8, 9, 10, 16, 63, 17 ತಲುಪಿ ರೈಲ್ವೆ ಹೆದ್ದಾರಿ ಮುಖಾಂತರ ಬಿಡದಿ ಸ.ನ. 20 ತಲುಪಿ ಬೆಂಗಳೂರು – ಮೈಸೂರು ರಸ್ತೆ ಹಾದು ಸ.ನ. 21 ಕ್ಕೆ ಕೊನೆಗೊಳ್ಳುತ್ತದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**URBAN DEVELOPMENT SECRETARIAT**
**NOTIFICATION**
**No. UDD 29 MLR 2015, Bengaluru, Dated: 05-08-2015**

Whereas the notification of declaring 'Gram Panchayath Area' of Bidadi along with 'Gram Panchayath Area of Bannikuppe (B), Kenchanakuppe and Ittamadu in Ramanagar District mentioned in Schedule "A" along with boundaries mentioned in Scheduled "B" as the "Smaller Urban Area" of Bidadi and further specifying such area to be the "Town Municipal Area" of Bidadi was published as required by Section 9 of the Karnataka Municipalities Act 1964, vide 'Government notification no. UDD 29 MLR 2015, dated:30.04.2015' in part- III, No.403 of Karnataka Gazette Extraordinary, dated:30.04.2015 inviting objections from all persons likely to be affected thereby on or before thirty days from the date of publication of the above notification.

And whereas the notification was made available to the public on the day of publication;

And whereas objections were received within the stipulated time have been examined;

Now, therefore, in exercise of the powers conferred by Section 3 read with Section 357 of the Karnataka Municipalities Act 1964, the Hon'ble Governor, hereby notify Bidadi and Banandur villages in Bidadi 'Gram Panchayath, Ketiganahalli and Avaragere villages in Bannikuppe(B) 'Gram

Panchayath, Kenchanakuppe, Kallugopahalli, Ulthar Hosadoddi and Muddapura Karenahalli villages in Kenchanakuppe 'Gram Panchayath and Abbanakuppe, Ittamadu and Heggadakere villages in Ittamadu Gram Panchayath mentioned in Schedule "A" along with boundaries mentioned in Scheduled "B" as the "**Smaller Urban Area" of Bidadi** and further specify such area to be the "**Town Municipal Area" of Bidadi** with effect from the date of publishing in the official gazette, having regard to-

i. The population of such area is not less than twenty thousand and not more than three lakhs;
ii. The density of population in such area is not less than one thousand five hundred inhabitants to one square kilometer of area;
iii. The revenue generated for local administration from such area from tax and non-tax sources in the year of the last preceding census is not less than rupees nine lakhs per annum or a sum calculated at the rate of rupees forty five per capita per annum, whichever is higher;
iv. The percentage of employment in non-agricultural activities is not less than fifty per cent of the total employment.

By Order and in the name of the Governor of Karnataka

**SIDDIQ PASHA**
Under Secretary to Government
Urban Development Department

**SCHEDULE – A**

**Bidadi Gram Panchayath**

1) Bidadi 2) Bananduru (Gollalli, Medanahalli,Jogadadoddi, Bairavanadoddi)

**Bannikuppe (B) Gram Panchayath**

1) Kethiganahalli 2) Avaragere

**Kenchanakuppe Gram Panchayath**

1) Kenchanakoppe (Kenchanakuppe, Janatha colony, thammana doddi, Halasinamaradadoddi, Kariyappana doddi, Chadrarayaradoddi)
2) Kallugopahalli (Dasappanadoddi, Ramakrishnappana Doddi)
3) Hulthar hosadoddi
4) Muddupurada Karenahalli (Shettigowdana Doddi, Narase gowdana Doddi, Hucchammana Doddi)

**Ittamadu Gram Panchayath**

1) Abbanakuppe (Vrushabhavathipura,Abbanakoppe colony)
2) Ettumudu(Thoredoddi, Thimmegowdanadoddi)
3) Heggadagere(Angarahalli, Heggadagere colony)

**SCHEDULE – B**

**EAST:** Starts from Bidadi Grama S.No.20 Passes Bangalore-Mysore road S.No. 21, 26, towards Bananduru Grama S.No. 94, 109, 106, 111 and ends 186. Abbanakuppe S.NO. 20, 21 and reaches S.No. 135 and touches 32 Bidadi Bairamangala road.

**SOUTH:** From East to South Abbanakuppe Starts at S.No. 137 and ends at 44, 49, 50, 52, Ettamadu Grama S.No. 119, 117, 116, 107, 106, 176, 177, 149, 103, 99, 96, 95, 66, 213, 199, 197, 192, 191 towards South.

**WEST:** From South Ettamadu Grama S.No. 187, 186, 185 and passes Uragalli road and touches Heggadagere Border S.No. 148,149,153,157,158,162, 243, 234, 231, 232, 171, 172, 173, 204, 205, 204, 06, 07,08,09,12,215,216,217, 218 and touches border Kallu gopahalli S.No. 21 and then passes Bangalore-Mysore High way S.No. 33,36 and reaches S.No. 01 of Kenchaguppe Border and passes S.No. 127 of Muddapura Karena halli border S.No. 58,59,135,,126,125,124 and ends at West.

**SOUTH:** West to South Muddapura Karenahalli S.No. 63, 64, 73, 115, 112, 74, 75, 76, 77, 78,79,80,82,83 along with Nalliguddekere and reaches Avaregere border S.No. 50,54,56 Banniguppe road S.No. 57, 60, 61, 04, 06, 07, 08, 09, 10,16, 63, 17 and then touches Railway border Bidadi S.No. 20 Bangaore-Mysore road and ends at S.No.21

**SIDDIQ PASHA**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೮) (೧೦೦ ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ – III | ಬೆಂಗಳೂರು, ಬುಧವಾರ, ಆಗಸ್ಟ್ ೦೫, ೨೦೧೫ (ಶ್ರಾವಣ ೧೪, ಶಕ ವರ್ಷ ೧೯೩೭) | ನಂ. ೯೦೬ |
|---|---|---|
| Part – III | Bengaluru, Wednesday, August 05, 2015 (Shravana 14, Shaka Varsha 1937 | No. 906 |


ನಗರಾಭಿವೃದ್ಧಿ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ನಅಇ 56 ಎಂಎಲ್‌ಆರ್ 2015, ಬೆಂಗಳೂರು, ದಿನಾಂಕ: 05–08–2015**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 9ನೇ ಪ್ರಕರಣದಲ್ಲಿ ಅಗತ್ಯಪಡಿಸಿದಂತೆ ಕೊಪ್ಪಳ ಜಿಲ್ಲೆಯ ಕುಕನೂರು ಗ್ರಾಮ ಪಂಚಾಯಿತಿ ಪ್ರದೇಶವನ್ನು 'ಕುಕನೂರು ಪರಿವರ್ತನಾ ಪ್ರದೇಶ'ವೆಂದೂ ಹಾಗೂ ಸದರಿ ಪರಿವರ್ತನಾ ಪ್ರದೇಶವನ್ನು 'ಕುಕನೂರು ಪಟ್ಟಣ ಪಂಚಾಯಿತಿ'ಯ ಪ್ರದೇಶವೆಂದು ನಿರ್ದಿಷ್ಟಪಡಿಸಲು ಪ್ರಸ್ತಾಪಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 56 ಎಂಎಲ್‌ಆರ್ 2015, ದಿನಾಂಕ 30–04–2015ನ್ನು ದಿನಾಂಕ: 30–04–2015ರ ಕರ್ನಾಟಕ ವಿಶೇಷ ರಾಜ್ಯ ಪತ್ರದ ಭಾಗ–3ರ ಸಂಖ್ಯೆ: 399ರಲ್ಲಿ ಪ್ರಕಟಿಸಿ, ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿ;

ಸದರಿ ರಾಜ್ಯ ಪತ್ರವನ್ನು ಪ್ರಕಟಿಸಿದ ದಿನಾಂಕದಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿ;

ನಿಗದಿತ ಅವಧಿಯಲ್ಲಿ ಸ್ವೀಕೃತವಾದ ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿರುವುದರಿಂದ;

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 349 ನೇ ಪ್ರಕರಣದೊಂದಿಗೆ ಓದಿಕೊಂಡ 351 ಮತ್ತು 355–ಬಿ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ, 'ಅನುಸೂಚಿ ಎ' ಮತ್ತು 'ಅನುಸೂಚಿ ಬಿ' ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಕೊಪ್ಪಳ ಜಿಲ್ಲೆಯ ಕುಕನೂರು ಗ್ರಾಮ ಪಂಚಾಯಿತಿ ಪ್ರದೇಶವನ್ನು 'ಕುಕನೂರು ಪರಿವರ್ತನಾ ಪ್ರದೇಶ'ವೆಂದೂ ಹಾಗೂ ಸದರಿ ಪರಿವರ್ತನಾ ಪ್ರದೇಶವನ್ನು 'ಕುಕನೂರು ಪಟ್ಟಣ ಪಂಚಾಯಿತಿ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ, ರಾಜ್ಯಪತ್ರದಲ್ಲಿ ಪ್ರಕಟಿಸಲಾದ ದಿನಾಂಕದಿಂದ ಜಾರಿಗೆ ಬರುವಂತೆ ಈ ಮೂಲಕ ಉದ್ಘೋಷಿಸಿರುತ್ತಾರೆ–

i. ಅಂಥ ಪ್ರದೇಶದ ಜನಸಂಖ್ಯೆ ಹತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಇಪ್ಪತ್ತು ಸಾವಿರಕ್ಕಿಂತ ಹೆಚ್ಚಿಲ್ಲದ;

ii. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ನಾಲ್ಕುನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು:–

iii. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು ಪರಿವರ್ತನಾ ಪ್ರದೇಶವೆಂಬುದಾಗಿ ಹಾಗೆ ನಿರ್ದಿಷ್ಟಪಡಿಸತಕ್ಕದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**<u>ಅನುಸೂಚಿ–ಎ</u>**

ಕುಕನೂರ

**<u>ಅನುಸೂಚಿ–ಬಿ</u>**

ಕುಕನೂರ ಗ್ರಾಮವು ಪೂರ್ವ ದಿಕ್ಕಿಗೆ 13ನೇ ವಾರ್ಡ ಗುದ್ನೆಶ್ವರ ಮಠ ಸರ್ವೆ ನಂ.78.72.73.75.76.91.ಇಲ್ಲಿಯ ವರೆಗೆ ವಿಸ್ತರಿಸಿದೆ, ದಕ್ಷಿಣ ದಿಕ್ಕಿಗೆ ಸರ್ವೆ ನಂ.41.13.693/1.12ನೇ ವಾರ್ಡ ಕೊಳಿಪೇಟೆ.ವರೆಗೆ ವಿಸ್ತರಿಸಿದೆ. ಉತ್ತರ ದಿಕ್ಕಿನಲ್ಲಿಯ ಸರ್ವೆ ನಂ.27, 31, 32, 33, 35, 38, 36, 37, 28/2, 31/2. 1ನೇ ವಾರ್ಡ ರಾಯರಡ್ಡಿ ಕಾಲೋನಿಯ ವರೆಗೆ ವಿಸ್ತರಿಸಿದೆ. ದಕ್ಷಿಣ ದಿಕ್ಕಿನಲಿಯ ಸರ್ವೆ ನಂ.110/5.109/1.194.272/1.195.110.269.199.106.ಕುರ್ತಕೊಟಿಯವರ ಕಾಲೋನಿ ಮತ್ತು ಸಂಗಮೇಶ್ವರ ಕಾಲೋನಿಯ ವರೆಗೆ ವಿಸ್ತರಿಸಿದೆ.

**ಸಿದ್ದಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**URBAN DEVELOPMENT SECRETARIAT**
**NOTIFICATION**
**No.UDD 56 MLR 2015, Bengaluru, Dated: 05-08-2015**

Whereas the notification of declaring 'Gram Panchayat Area' of Kukanur mentioned in Schedule "A" along with boundaries mentioned in Scheduled "B" as the "Transitional Area" of Kukanur and further specifying such area to be the "Town Panchayath Area" of Kukanur was published as required by Section 9 of the Karnataka Municipalities Act 1964, vide 'Government notification no. UDD 56 MLR 2015, dated:30-04-2015 in part- III, No.399 of Karnataka Gazette Extraordinary, dated: 30-04-2015 inviting objections from all persons likely to be affected thereby on or before thirty days from the date of publication of the above notification.

And whereas the notification was made available to the public on the day of publication;

And whereas objections were received within the stipulated time have been examined;

Now, therefore, in exercise of the powers conferred by Section 349 read with Section 351 and 355-B of the Karnataka Municipalities Act 1964, the Governor, hereby notify 'Gram Panchayat Area' of Kukanur in Koppal District mentioned in Schedule "A" along with boundaries mentioned in Scheduled "B" as the **"Transitional Area" of Kukanur** and further specify such area to be the **"Town Panchayath Area" of Kukanur** with effect from the date of publishing in the official gazette, having regard to-

i. The population of such area is not less than ten thousand and not more than Twenty thousand;
ii. The density of population in such area is not less than four hundred inhabitants to one square kilometer of area;
iii. The percentage of employment in non-agricultural activities is not less than fifty per cent of the total employment;

By Order and in the name of the Governor of Karnataka,

**SIDDIQ PASHA**
Under Secretary to Government,
Urban Development Department.

**<u>SCHEDULE-A</u>**

**Kukanoor**

**<u>SCHEDULE-B</u>**

**Kukanoor.** Village Grama Thana to the **East** side village boundary **Survey No,** 78.72.73.75.76.91.ends at 13th Ward Gudneshwara Mutt. Side Land boundary

**West** –**Survey No.** 41, 13, 693/1., ends at 12th Ward Kolipet Side Land boundary

**North**. **Survey No.**27, 31, 32, 33, 38, 36, 37, 28/2, 31/2. Ward No.1, Rayaraddi Colony Side Land boundary

**South**.**SurveyNo,**110/5.109/1.194.272/1.195.110.269.99.106.and Kurthakoti, Kaloni and Sangamesvara Colony, ends at Side Land boundary

**SIDDIQ PASHA**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿಆ) (100 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ - III | ಬೆಂಗಳೂರು, ಬುಧವಾರ, ಆಗಸ್ಟ್ ೦೫, ೨೦೧೫ (ಶ್ರಾವಣ ೧೪, ಶಕ ವರ್ಷ ೧೯೩೭) | ನಂ. ೯೦೭ |
|---|---|---|
| Part - III | Bengaluru, Wednesday, August 05, 2015 (Shravana 14, Shaka Varsha 1937) | No. 907 |

ನಗರಾಭಿವೃದ್ಧಿ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ನಅಇ 82 ಎಂಎಲ್ಆರ್ 2015, ಬೆಂಗಳೂರು, ದಿನಾಂಕ: 05-08-2015**

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 9ನೇ ಪ್ರಕರಣದಲ್ಲಿ ಅಗತ್ಯಪಡಿಸಿದಂತೆ ಜಾಲಿ ಗ್ರಾಮ ಪಂಚಾಯಿತಿ ಪ್ರದೇಶವನ್ನು 'ಜಾಲಿ ಪರಿವರ್ತನಾ ಪ್ರದೇಶ'ವೆಂದೂ ಹಾಗೂ ಸದರಿ ಪರಿವರ್ತನಾ ಪ್ರದೇಶವನ್ನು 'ಜಾಲಿ ಪಟ್ಟಣ ಪಂಚಾಯಿತಿ'ಯ ಪ್ರದೇಶವೆಂದು ನಿರ್ದಿಷ್ಟಪಡಿಸಲು ಪ್ರಸ್ತಾಪಿಸಿ, ಸರ್ಕಾರದ ಅಧಿಸೂಚನೆ ಸಂಖ್ಯೆ ನಅಇ 82 ಎಂಎಲ್ಆರ್ 2015, ದಿನಾಂಕ 30-04-2015ನ್ನು ದಿನಾಂಕ: 30-04-2015ರ ಕರ್ನಾಟಕ ವಿಶೇಷ ರಾಜ್ಯ ಪತ್ರದ ಭಾಗ-3ರ ಸಂಖ್ಯೆ: 427ರಲ್ಲಿ ಪ್ರಕಟಿಸಿ, ಇದರಿಂದ ಬಾಧಿತರಾಗಬಹುದಾದ ವ್ಯಕ್ತಿಗಳಿಂದ ಸದರಿ ಅಧಿಸೂಚನೆಯನ್ನು ಪ್ರಕಟಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿ;

ಸದರಿ ರಾಜ್ಯ ಪತ್ರವನ್ನು ಪ್ರಕಟಿಸಿದ ದಿನಾಂಕದಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿ;

ನಿಗದಿತ ಅವಧಿಯಲ್ಲಿ ಸ್ವೀಕೃತವಾದ ಆಕ್ಷೇಪಣೆಗಳನ್ನು ಪರಿಶೀಲಿಸಲಾಗಿರುವುದರಿಂದ;

ಕರ್ನಾಟಕ ಪೌರಸಭೆಗಳ ಕಾಯ್ದೆ 1964ರ 349 ನೇ ಪ್ರಕರಣದೊಂದಿಗೆ ಓದಿಕೊಂಡ 351 ಮತ್ತು 355-ಬಿ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಕೆಳಗಿನವುಗಳನ್ನು ಗಮನಿಸಿ, 'ಅನುಸೂಚಿ ಎ' ಮತ್ತು 'ಅನುಸೂಚಿ ಬಿ' ಯಲ್ಲಿ ನಿರ್ದಿಷ್ಟಪಡಿಸಲಾದ ಪರಿಮಿತಿಯುಳ್ಳ ಉತ್ತರ ಕನ್ನಡ ಜಿಲ್ಲೆಯ ವೆಂಕಟಾಪುರ ಮತ್ತು ತಗ್ಗರಗೋಡು ಗ್ರಾಮಗಳನ್ನೊಳಗೊಂಡ ಜಾಲಿ ಗ್ರಾಮ ಪಂಚಾಯಿತಿ ಪ್ರದೇಶಗಳನ್ನು 'ಜಾಲಿ ಪರಿವರ್ತನಾ ಪ್ರದೇಶ'ವೆಂದೂ ಹಾಗೂ ಸದರಿ ಪರಿವರ್ತನಾ ಪ್ರದೇಶವನ್ನು 'ಜಾಲಿ ಪಟ್ಟಣ ಪಂಚಾಯಿತಿ'ಯ ಪ್ರದೇಶವೆಂದು ಸಹ ಪದನಾಮೀಕರಿಸಿ, ರಾಜ್ಯಪತ್ರದಲ್ಲಿ ಪ್ರಕಟಿಸಲಾದ ದಿನಾಂಕದಿಂದ ಜಾರಿಗೆ ಬರುವಂತೆ ಈ ಮೂಲಕ ಉದ್ಘೋಷಿಸಿರುತ್ತಾರೆ-

i. ಅಂಥ ಪ್ರದೇಶದ ಜನಸಂಖ್ಯೆ ಹತ್ತು ಸಾವಿರಕ್ಕಿಂತ ಕಡಿಮೆಯಿಲ್ಲದ ಮತ್ತು ಇಪ್ಪತ್ತು ಸಾವಿರಕ್ಕಿಂತ ಹೆಚ್ಚಿಲ್ಲದ;

ii. ಅಂಥ ಪ್ರದೇಶದಲ್ಲಿನ ಜನಸಂಖ್ಯೆಯ ಸಾಂದ್ರತೆಯು ಒಂದು ಚದರ ಕಿಲೋಮೀಟರ್ ಪ್ರದೇಶಕ್ಕೆ ನಾಲ್ಕುನೂರು ನಿವಾಸಿಗಳಿಗಿಂತ ಕಡಿಮೆಯಿಲ್ಲದ ಹೊರತು:-

iii. ಕೃಷಿಯೇತರ ಚಟುವಟಿಕೆಗಳಲ್ಲಿನ ಉದ್ಯೋಗದ ಶೇಕಡಾವಾರು ಒಟ್ಟು ಉದ್ಯೋಗದ ಶೇಕಡ ಐವತ್ತಕ್ಕಿಂತ ಕಡಿಮೆಯಿಲ್ಲದ ಹೊರತು ಪರಿವರ್ತನಾ ಪ್ರದೇಶವೆಂಬುದಾಗಿ ಹಾಗೆ ನಿರ್ದಿಷ್ಟಪಡಿಸತಕ್ಕದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**ಅನುಸೂಚಿ "ಎ"**

**ಜಾಲಿ, ವೆಂಕಟಾಪುರ, ತಗ್ಗರಗೋಡು ಗ್ರಾಮಗಳು**

**ಅನುಸೂಚಿ "ಬಿ"**

**ಪೂರ್ವ:** ಪೂರ್ವದ ಗಡಿಯು ಕಡುವಿನ ಕಟ್ಟೆ ಸರ್ವೆ ನಂ. 80, 87 ರಿಂದ ಪ್ರಾರಂಭವಾಗಿ ಉತ್ತರ ದಿಕ್ಕಿಗೆ ಸರ್ವೆ ನಂ. 65,66 ಸುತ್ತುವರೆದು ಪೂರ್ವ ದಿಕ್ಕಿಗೆ ಸರ್ವೆ ನಂ 89 ಹಾಗೂ ರಾಷ್ಟ್ರೀಯ ಹೆದ್ದಾರಿ 17 ಸುತ್ತುವರೆಯುತ್ತದೆ.

**ಪಶ್ಚಿಮ:** ಪಶ್ಚಿಮ ದಿಕ್ಕು ಅರಬೀ ಸಮುದ್ರ ಸರ್ವೆ ನಂ. 188 ರಿಂದ ಪ್ರಾರಂಭವಾಗಿ ಜಾಲಿಕೋಡಿ ಸರ್ವೆ ನಂ. 128 ಮುಂದೆ ದೊಡ್ಡಮನೆ ಸರ್ವೆ ನಂ. 45, 46 ಮಧ್ಯದಲ್ಲಿ ಜಾಲಿ ಮುಖ್ಯರಸ್ತೆ ಬಂದು ನಂತರ ಸಣ್ಮನೆ ಸರ್ವೆ ನಂ. 120, ಹಾರುಮಕ್ಕಿ ಗಡಿ ಸರ್ವೆ ನಂ. 175 ಗಡಿ ಸುತ್ತುವರೆಯುತ್ತದೆ.

(i) Any road widening/any road formation as proposed in Master Plan or as proposed by the Local Authority;

(ii) Any Infrastructure projects approved by the Government (Transportation, Water Supply, Sewage, Electricity, etc.,..)

(iii) Providing for parking, parks, playgrounds and open spaces or any other public places proposed in the master plan or proposed by Local Authority except cases under Section 15 and 17;

(iv) Providing EWS/LIG/affordable housing; and

(v) Any other public purpose notified by the Government from time to time."

(k) "Transferable Development Rights" (TDR) means the Development Right given in the form of 'Notional Land' to an owner, which can be sold or disposed or utilised elsewhere in the Local Planning Area. The DR of the 'Area' surrendered in the form of 'Notional Land', shall be permitted as TDR only after factorising the Market Value of the Originating Plot and the Receiving Plot, as specified in the Terms and Conditions.

**5. Amendment of section 17.-** In section 17 of the principal Act, for sub-sections (1) and (2), the following shall be substituted, namely:-

"(1) The State Government shall by rules prescribe the standards to be followed and minimum extent of Land to be considered for approval of Layout for sub dividing a plot and prescribe the minimum extent of area to be earmarked for park, open spaces and civic amenity sites and laying out roads. Every person who intends to sub divide his plot by making a layout on or after the date of the publication of the declaration of Local Planning Area under section 4-A, shall submit detailed plan of the layout of his plot showing layout of roads, sub-divided plots and earmarking area for park and open spaces and civic amenities to such extent and in such manner, as prescribed.

(2) The Planning Authority may, within the prescribed period, sanction such plan either without modification or subject to such modifications and conditions as it considers expedient or may refuse to give sanction, if the planning authority is of the opinion that such plan is not in any way consistent with the proposals of the Master Plan.

Provided that where the Master Plans are not finally approved, in such cases the Planning Authority may sanction the layout plan as per the guidelines issued by the Government from time to time.

(2A) If the Authority decides to sanction the layout plans under sub-section (2), it shall sanction provisional layout plan in accordance with such rules as may be prescribed for demarcation and development purposes showing the sites, street alignment, park and civic amenity area and any other infrastructure facility including the arrangement to be made for leveling, paving, metalling, flagging, channeling, sewering, draining, street lighting and water supply to the satisfaction of the Planning Authority and local authority. One copy of such plan shall be marked to the jurisdictional local authority. The owner shall relinquish the roads, parks to the local authority and Civic Amenity areas to the Planning Authority through registered relinquishment deed free of cost without claiming any compensation.

(2B) The Planning Authority shall ensure the completion of all development works including all infrastructure facilities as mentioned in sub-section (2A) under the supervision of the concerned Authority/ Agency/Department. On obtaining the certificate of completion from the concerned Authority/Agency/Department on having completed all the development works and on relinquishment of the roads, parks to the local authority and Civic Amenity areas to the Planning Authority and handing over the same, the Planning Authority may issue the final layout plan affixing the seal of the Planning Authority for registration purpose.

Provided that no Commencement Certificate or licence shall be sanctioned or issued for buildings on sites in the layout unless the final layout plan is issued."

**6. Amendment of section 18.-** In section 18 of the principal Act, for sub section (1A), the following shall be substituted, namely:-

"(1A) Where an application for permission for development of building or land or sanction for sub-division of plot or layout of Private Street is submitted under section 15 or 17 to any Planning Authority, such Planning Authority shall levy and collect an additional prescribed fee for rejuvenation of lakes or tanks, if any, in that local planning area."

**7. Amendment of section 18-A. -** In section 18-A of the principal Act, the clause (v) shall be omitted

**8. Substitution of section 69.-** For section 69 of the principal Act, the following shall be substituted, namely:-

"**69. Acquisition of land designated for certain purposes in a Master Plan.-** (1) The Planning Authority may acquire any land designated in the Master Plan for "public purposes" by agreement or under the Right to Fair Compensation and Transparency in Land Acquisition Rehabilitation and Resettlement Act, 2013 (Central Act 30 of 2013) as in force in the State.

**Explanation.-** For the purpose of this section land "designated for public purpose" means designated for the purpose of providing parks, open spaces, public or semi public utilities and infrastructure relating to transport.

(2) If the land designated for public purpose, as under sub-section (1), except land designated for purpose of clause (b) of sub-section (1) of section 12 is not acquired either by agreement within five years from the date of publication of the Master Plan under sub-section (4) of section 13 nor the proceedings under the Right to Fair Compensation and Transparency in land Acquisition, Rehabilitation and Resettlement Act, 2013(Central Act 30 of 2013) are commenced within period of five years, the designation shall be deemed to have lapsed.

(3) When the designated land use lapses under sub-section (2), the Authority may consider the new land use sought by the land owner of such land, based on the surrounding developments, in the meeting of the Authority, after previous publication in one or more daily newspapers of which at least one shall be in local language having wide circulation in the area and call for objections and suggestions in this regard.

(4) The Planning Authority shall after considering the proposals to assign land uses and objects and suggestions received in that behalf in the meeting of the Authority, the Authority may convey the assignment of new land use to the owner or reject the proposal for the reasons recorded there in.”

By Order and in the name of the Governor of Karnataka

**S.B. GUNJIGAVI**
Secretary to Government
Department of Parliamentary Affairs

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (450 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ– IV-A | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೧೧, ೨೦೧೫ (ಭಾದ್ರಪದ ೨೦, ಶಕ ವರ್ಷ ೧೯೩೭) | ನಂ. ೯೮೩ |
|---|---|---|
| Part– IV-A | Bengaluru, Friday, September 11, 2015 (Bhadrapada 20, Shaka Varsha 1937) | No. 983 |


ಸಂಸದೀಯ ವ್ಯವಹಾರಗಳ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 28 ಶಾಸನ 2015, ಬೆಂಗಳೂರು, ದಿನಾಂಕ:11.09.2015**

ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ತಿದ್ದುಪಡಿ) ವಿಧೇಯಕ, 2015ಕ್ಕೆ 2015ರ ಸೆಪ್ಟೆಂಬರ್ ತಿಂಗಳ ಐದನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2015ರ ಕರ್ನಾಟಕ ಅಧಿನಿಯಮ ಸಂಖ್ಯೆ: 39 ಎಂಬುದಾಗಿ ಕರ್ನಾಟಕ ರಾಜ್ಯಪತದಲ್ಲಿ ಪಕಟಿಸಬೇಕೆಂದು ಆದೇಶಿಸಲಾಗಿದೆ.

**2015 ರ ಕರ್ನಾಟಕ ಅಧಿನಿಯಮ ಸಂಖ್ಯೆ: 39**

(2015 ರ ಸೆಪ್ಟೆಂಬರ್ ಹನ್ನೊಂದನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ)**
**(ತಿದ್ದುಪಡಿ) ಅಧಿನಿಯಮ, 2015**

(2015 ರ ಸೆಪ್ಟೆಂಬರ್ ಐದನೇ ದಿನಾಂಕದಂದು ರಾಜ್ಯಪಾಲರ ಅನುಮತಿಯನ್ನು ಪಡೆಯಲಾಗಿದೆ)

ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ನ್ನು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಈ ಮುಂದಿನವುಗಳಿಗಾಗಿ, ಎಂದರೆ:–

**(1)** ಅಲ್ಪಸಂಖ್ಯಾತೇತರ ಅಥವಾ ಅಲ್ಪಸಂಖ್ಯಾತ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆಯೊಂದಿಗೆ ಸಮ್ಮತಾಭಿಪ್ರಾಯದ ಒಪ್ಪಂದವನ್ನು ಮಾಡಿಕೊಳ್ಳಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುವುದಕ್ಕೆ ಹಾಗೂ ಬಹುಪಾಲು ವೃತ್ತಿ ಶಿಕ್ಷಣ ಸಂಸ್ಥೆಗಳು ಸ್ವೀಕರಿಸಬಹುದಾದ ಒಂದು ಕಾನೂನಾತ್ಮಕ ಚೌಕಟ್ಟನ್ನು ನೀಡಲು; ರಾಜ್ಯವು ರಚಿಸಿರುವ ಸಾಮಾನ್ಯ ಪ್ರವೇಶ ಪರೀಕ್ಷೆ ಸಮಿತಿಯ ಮೂಲಕ ಖಾಸಗಿ ಶೈಕ್ಷಣಿಕ ಸಂಸ್ಥೆಗಳಲ್ಲಿ ತುಂಬಬೇಕಾದ ಸರ್ಕಾರಿ ಸೀಟುಗಳ ಕೋಟಾವನ್ನು ಸಮ್ಮತಾಭಿಪ್ರಾಯದ ಒಪ್ಪಂದದ ಮೂಲಕ ಕಲ್ಪಿಸಿ ರಾಜ್ಯದ ಪ್ರತಿಭಾನ್ವಿತ ವಿದ್ಯಾರ್ಥಿಗಳ ಮತ್ತು ಸಂಸ್ಥೆಗಳ ಹಿತಾಸಕ್ತಿಯನ್ನು ಕಾಪಾಡುವುದಕ್ಕಾಗಿ; ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳೊಂದಿಗೆ ಸಮ್ಮತಾಭಿಪ್ರಾಯದ ಒಪ್ಪಂದವನ್ನು ಮಾಡಿಕೊಳ್ಳುವಾಗ ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿಯ ಮೂಲಕ ಆಯ್ಕೆಯಾದ ಯಾವೊಬ್ಬ ವಿದ್ಯಾರ್ಥಿಗೂ ಹೆಚ್ಚಿನ ಹೊರೆ ಬೀಳದಂತೆ ನೋಡಿಕೊಳ್ಳುವುದು ಅಥವಾ ರಿಯಾಯಿತಿಗಳು ಮತ್ತು ವಿದ್ಯಾರ್ಥಿ ವೇತನವನ್ನು ಒದಗಿಸುವ ಮೂಲಕ ಕರ್ನಾಟಕ ವಿದ್ಯಾರ್ಥಿಯ ಹಿತಾಸಕ್ತಿಯನ್ನು ಕಾಪಾಡಲು; ಮತ್ತು

(2) ಯಾವೊಬ್ಬ ವಿದ್ಯಾರ್ಥಿಗೂ ಹೆಚ್ಚಿನ ಹೊರೆ ಬೀಳದಂತೆ ಸರ್ವೋಚ್ಚ ನ್ಯಾಯಾಲಯವು ಕಡ್ಡಾಯಪಡಿಸಿದಂತೆ ಕೈಗೆಟಕುವ ದರದಲ್ಲಿ ಯುಕ್ತ ಶುಲ್ಕವನ್ನು ನಿಗದಿಪಡಿಸಲು ಶುಲ್ಕ ನಿಯಂತ್ರಣ ಸಮಿತಿಗೆ ಮಾರ್ಗಸೂಚಿಗಳನ್ನು ನೀಡಲು ಹಾಗೂ ಪರಿಸ್ಥಿತಿಯ ಕಾರ್ಯಸಾಧ್ಯತೆಯನ್ನು ನಿರ್ವಹಿಸಲು ಅನುವಾಗುವಂತೆ ಮಾಡಲು,

–ಉಪಬಂಧಗಳನ್ನು ಕಲ್ಪಿಸುವುದಕ್ಕಾಗಿ ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ನ್ನು (2006ರ ಕರ್ನಾಟಕ ಅಧಿನಿಯಮ 8) ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ,

ಇದು ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ;

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ತಿದ್ದುಪಡಿ) ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.–** ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) ಅಧಿನಿಯಮ, 2006ರ (2006ರ ಕರ್ನಾಟಕ ಅಧಿನಿಯಮ 8) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಕರೆಯಲಾಗಿದೆ) 2ನೇ ಪ್ರಕರಣದಲ್ಲಿ,–

(ಎ) (ಎ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎ) "ಪ್ರವೇಶ" ಎಂದರೆ, ಪ್ರತಿಭೆಯನ್ನು ಆಧರಿಸಿದ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಪ್ರವೇಶ ಕೇಂದ್ರದಲ್ಲಿ ವೃತ್ತಿ ಶಿಕ್ಷಣ ವ್ಯಾಸಂಗಕ್ರಮಗಳಿಗೆ ಮಾಡಲಾದ ಪ್ರವೇಶ;"

(ಬಿ) (ಸಿ) ಖಂಡದಲ್ಲಿ, "ಅನುದಾನ ಪಡೆಯದ" ಎಂಬ ಪದಗಳಿಗೆ "ಅನುದಾನಿತ ಅಥವಾ ಅನುದಾನಿತವಲ್ಲದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಸಿ) (ಎಫ್) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ,–

"(ಎಫ್)" ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕ ಅಥವಾ ಸಮಿತಿ" ಎಂದರೆ, ಸಾಮಾನ್ಯ ಪ್ರವೇಶ ಪರೀಕ್ಷೆಯನ್ನು ನಡೆಸುವ, 3ನೇ ಪ್ರಕರಣದ ಅಡಿಯಲ್ಲಿ ರಚಿತವಾದ ರಾಜ್ಯ ಸರ್ಕಾರದ ಏಜೆನ್ಸಿ."

(ಡಿ) (ಎಫ್) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಎಫ್‌ಎಫ್) "ಡೀಮ್ಡ್ ವಿಶ್ವವಿದ್ಯಾಲಯ ಸಂಸ್ಥೆಗಳು" ಎಂದರೆ, ಕರ್ನಾಟಕ ರಾಜ್ಯದಲ್ಲಿ ಇರುವ ಡೀಮ್ಡ್ ವಿಶ್ವವಿದ್ಯಾಲಯಗಳು ಸ್ಥಾಪಿಸಿ ನಿರ್ವಹಿಸುತ್ತಿರುವ ವೃತ್ತಿ ಶಿಕ್ಷಣ ವ್ಯಾಸಂಗ ಕ್ರಮಗಳ ಸಂಸ್ಥೆಗಳು."

(ಇ) (ಐ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಐ) "ಸರ್ಕಾರಿ ಸೀಟುಗಳು" ಎಂದರೆ, ಸರ್ಕಾರಿ ಕಾಲೇಜುಗಳಲ್ಲಿ, ವಿಶ್ವವಿದ್ಯಾಲಯ ಘಟಕ ಕಾಲೇಜುಗಳಲ್ಲಿ ಇರುವ ಎಲ್ಲಾ ಸೀಟುಗಳು, ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ಖಾಸಗಿ ಅನುದಾನಿತ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿನ ಅಂಥ ಸಂಖ್ಯೆಯ ಸೀಟುಗಳು, ಮತ್ತು ಅನುದಾನಿತವಲ್ಲದ ಅಲ್ಪಸಂಖ್ಯಾತ ಮತ್ತು ಅಲ್ಪಸಂಖ್ಯಾತೇತರ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿನ ಅಂಥ ಸಂಖ್ಯೆಯ ಸೀಟುಗಳು ಮತ್ತು ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳು, ಖಾಸಗಿ ವಿಶ್ವವಿದ್ಯಾಲಯಗಳು, ಡೀಮ್ಡ್ ವಿಶ್ವವಿದ್ಯಾಲಯಗಳು ಹಾಗೂ ರಾಜ್ಯ ಸರ್ಕಾರದ ನಡುವೆ ಮೂಡಿಬಂದ ಸಮ್ಮತಾಭಿಪ್ರಾಯಕ್ಕೆ ಅನುಸಾರವಾಗಿ ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂಥ ಖಾಸಗಿ ವಿಶ್ವವಿದ್ಯಾಲಯಗಳು ಮತ್ತು ಡೀಮ್ಡ್ ವಿಶ್ವವಿದ್ಯಾಲಯಗಳಲ್ಲಿನ ಸೀಟುಗಳು;"

(ಎಫ್) (ಜೆ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಜೆಜೆ) "ಸಂಸ್ಥೆಯ ಸೀಟುಗಳು" ಎಂದರೆ, ಅಲ್ಪಸಂಖ್ಯಾತೇತರ ಅಥವಾ ಅಲ್ಪಸಂಖ್ಯಾತ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳು ತುಂಬುವ, ಸರ್ಕಾರಿ ಸೀಟುಗಳನ್ನು ಹೊರತುಪಡಿಸಿದ, ಸೀಟುಗಳು."

(ಜಿ) (ಕೆ) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಕೆಕೆ) "ಕರ್ನಾಟಕದ ವಿದ್ಯಾರ್ಥಿ" ಎಂದರೆ, ಸರ್ಕಾರವು ನಡೆಸುವ ಅಥವಾ ಮಾನ್ಯತೆ ನೀಡಿರುವ ಕರ್ನಾಟಕ ರಾಜ್ಯದಲ್ಲಿನ ಅಂಥ ಶೈಕ್ಷಣಿಕ ಸಂಸ್ಥೆಗಳಲ್ಲಿ ಮತ್ತು ನಿಯಮಿಸಬಹುದಾದಷ್ಟು ವರ್ಷಗಳು ವ್ಯಾಸಂಗ ಮಾಡಿರುವ ವ್ಯಕ್ತಿಗಳು."

**3. 3ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 3ನೇ ಪ್ರಕರಣದಲ್ಲಿ,–

(ಎ) (1)ನೇ ಉಪಪ್ರಕರಣದಲ್ಲಿ,–

(i) (ಎ) ಖಂಡಕ್ಕೆ ಈ ಮುಂದಿನವನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

| | | |
|---|---|---|
| "(ಎ) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಉನ್ನತ ಶಿಕ್ಷಣ ಇಲಾಖೆ | – ಅಧ್ಯಕ್ಷರು |
| (ಎ1) | ಸರ್ಕಾರದ ಕಾರ್ಯದರ್ಶಿ, ವೈದ್ಯಕೀಯ ಶಿಕ್ಷಣ ಇಲಾಖೆ | – ಸಹ ಅಧ್ಯಕ್ಷರು |
| (ಎ2) | ರಾಜ್ಯ ಸರ್ಕಾರವು ನಾಮ ನಿರ್ದೇಶಿಸಿದ, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ ಅಥವಾ ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ ಇವೆರಡರಲ್ಲಿ ಒಂದರ ಕುಲಪತಿ | – ಸದಸ್ಯರು." |

(ii) (ಇ) ಖಂಡದಲ್ಲಿ, "ಅಧ್ಯಕ್ಷರು" ಎಂಬ ಪದಕ್ಕೆ "ರಾಜ್ಯ ಸರ್ಕಾರವು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) (5)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(5ಎ) ಸಮಿತಿಯ ರಚನೆಯಲ್ಲಿನ ಯಾವುದೇ ಖಾಲಿಸ್ಥಾನವು ಸಮಿತಿಯ ವ್ಯವಹರಣೆಗಳನ್ನು ಅಸಿಂಧುಗೊಳಿಸತಕ್ಕದ್ದಲ್ಲ."

**4. 4ನೇ ಪ್ರಕರಣದ ಪ್ರತಿಯೋಜನೆ.–** ಮೂಲ ಅಧಿನಿಯಮದ 4ನೇ ಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"**4. ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶ ವಿಧಾನ.–** ಯಾವುದೇ ಒಂದು ವ್ಯಾಸಂಗ ವಿಷಯದಲ್ಲಿ ವೃತ್ತಿ ಶಿಕ್ಷಣವನ್ನು ನೀಡುತ್ತಿರುವ ಅಲ್ಪಸಂಖ್ಯಾತ ಅಥವಾ ಅಲ್ಪಸಂಖ್ಯಾತೇತರ ಎಲ್ಲಾ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆಯು ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕವೇ ಪ್ರವೇಶವನ್ನು ನೀಡತಕ್ಕದ್ದು:

ಪರಂತು, ಸರ್ಕಾರಿ ಸೀಟುಗಳನ್ನು ಹೊರತುಪಡಿಸಿದ ಸೀಟುಗಳಿಗಾಗಿ, ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಪ್ರವೇಶವನ್ನು ನೀಡುವುದಕ್ಕೆ ಇಚ್ಛಿಸುವ ಯಾವುದೇ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆ ಅಥವಾ ಡೀಮ್ಡ್ ವಿಶ್ವವಿದ್ಯಾಲಯವು, ಸಾಮಾನ್ಯ ಪ್ರವೇಶ ಪರೀಕ್ಷೆ ಸಮಿತಿಯ ಜೊತೆಗೆ ಸೇರುವ ಮತ್ತು ಅರ್ಹತೆಯ ಕ್ರಮದಲ್ಲಿ ಮತ್ತು ಕೌನ್ಸಿಲಿಂಗ್ ಮೂಲಕ ಪ್ರವೇಶವನ್ನು ನೀಡುವ ತಮ್ಮ ಆಯ್ಕೆಯನ್ನು ಕೂಡಾ ಚಲಾಯಿಸಹುದು."

**5. 4ಎ ಮತ್ತು 4ಬಿ ಹೊಸ ಪ್ರಕರಣಗಳ ಸೇರ್ಪಡೆ.–** ಮೂಲ ಅಧಿನಿಯಮದ 4ನೇ ಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**4ಎ. ಸಮ್ಮತಾಭಿಪ್ರಾಯದ ಒಪ್ಪಂದದ ಸಂದರ್ಭದಲ್ಲಿ ಪ್ರವೇಶ ವಿಧಾನ.–** (1) ಈ ಅಧಿನಿಯಮದಲ್ಲಿ ಏನೇ ಇದ್ದರೂ, ರಾಜ್ಯ ಸರ್ಕಾರ ಮತ್ತು ಅಲ್ಪಸಂಖ್ಯಾತ ಅಥವಾ ಅಲ್ಪಸಂಖ್ಯಾತೇತರ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳು, ಸದರಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಅಂಥ ಸೀಟುಗಳ ಸಂಬಂಧದಲ್ಲಿ, ಸೀಟುಗಳ ಹಂಚಿಕೆ ಮತ್ತು ಶುಲ್ಕ ನಿಗದಿಯ ಕುರಿತು ಸಮ್ಮತಾಭಿಪ್ರಾಯ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಬರಲು, ರಾಜ್ಯ ಸರ್ಕಾರ ಮತ್ತು ಅಲ್ಪಸಂಖ್ಯಾತ ಅಥವಾ ಅಲ್ಪಸಂಖ್ಯಾತೇತರ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳು ಒಪ್ಪಿದ ಸಂದರ್ಭದಲ್ಲಿ, ಅಂಥ ವರ್ಷದಲ್ಲಿ, ರಾಜ್ಯ ಸರ್ಕಾರ ಮತ್ತು ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಮೂಲಕ ಒಪ್ಪಿಗೆಯಾದಂಥ ಸಂಖ್ಯೆಯ ಸೀಟುಗಳಿಗೆ ಪ್ರವೇಶವನ್ನು, ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿನ ಸರ್ಕಾರಿ ಸೀಟುಗಳಿಗೆ ಪ್ರವೇಶಕ್ಕಾಗಿ ಆಯ್ಕೆಯ ಕುರಿತು ಸರ್ಕಾರವು ನಿಯಮಿಸಬಹುದಾದಂಥ ನಿಯಮಗಳಿಗೆ ಮತ್ತು 371ಜೆ ಅನುಚ್ಛೇದದ ಅಡಿಯಲ್ಲಿನ ಮೀಸಲಾತಿಯನ್ನು ಒಳಗೊಂಡಂತೆ ರಾಜ್ಯದ ಮೀಸಲಾತಿ ಕಾರ್ಯನೀತಿಗೆ ಅನುಸಾರವಾಗಿ ಸರ್ಕಾರಿ ಸೀಟುಗಳಂತೆ, ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿಯ ಮೂಲಕ ಮಾಡತಕ್ಕದ್ದು. ಉಳಿದ ಸೀಟುಗಳನ್ನು, ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆ ಅಥವಾ ಧಾರ್ಮಿಕ ಹಾಗೂ ಭಾಷಾ ಅಲ್ಪಸಂಖ್ಯಾತ ಸಂಸ್ಥೆಗಳ ಸಂಘಟನೆಯು, ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ, ನಿಯಮಿಸಬಹುದಾದಂಥ ನಿಯಮಗಳಿಗೆ ಒಳಪಟ್ಟು ಸಮ್ಮತಾಭಿಪ್ರಾಯದ ಒಪ್ಪಂದಕ್ಕೆ ಅನುಸಾರವಾಗಿ ನ್ಯಾಯ ಸಮ್ಮತವಾದ, ಪಾರದರ್ಶಕವಾದ ಮತ್ತು ಶೋಷಣೆಯಾಗದ ರೀತಿಯಲ್ಲಿ ಕೇಂದ್ರಿಕೃತ ಕೌನ್ಸಿಲಿಂಗ್ ಮಾಡಿ ಅರ್ಹತೆಯ ಆಧಾರದ ಮೇಲೆ, ತುಂಬತಕ್ಕದ್ದು. ಸಮ್ಮತಾಭಿಪ್ರಾಯದ ವ್ಯವಸ್ಥೆ ಅಥವಾ ಒಪ್ಪಂದಕ್ಕೆ ಒಳಪಟ್ಟು, ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ, ಈ ಕೆಳಗೆ ನಿರ್ದಿಷ್ಟಪಡಿಸಿದ ರೀತಿಯಲ್ಲಿ, ರಾಜ್ಯ ಸಾಮಾನ್ಯ ಪ್ರವೇಶ ಪರೀಕ್ಷೆ ಸಮಿತಿ ಮತ್ತು ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆಯ ಮೂಲಕ ತುಂಬಬೇಕಾದ ಸೀಟು ಮ್ಯಾಟ್ರಿಕ್ಸ್ ಅನ್ನು, ಪ್ರಕಟಿಸತಕ್ಕದ್ದು, ಎಂದರೆ:–

(ಎ) ಅನುದಾನಿತವಲ್ಲದ ಅಲ್ಪಸಂಖ್ಯಾತೇತರ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ, ವೈದ್ಯಕೀಯ ಅಥವಾ ದಂತವೈದ್ಯಕೀಯ ಪದವಿಗೆ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ,–

(i) ವೈದ್ಯಕೀಯ ಸೀಟುಗಳ ಸಂದರ್ಭದಲ್ಲಿ ಶೇಕಡಾ ನಲವತ್ತಕ್ಕೆ ಕಡಿಮೆಯಲ್ಲದಷ್ಟು ಸೀಟುಗಳನ್ನು ಮತ್ತು ದಂತವೈದ್ಯಕೀಯ ಸೀಟುಗಳ ಸಂದರ್ಭದಲ್ಲಿ ಶೇಕಡಾ ಮೂವತ್ತೈದಕ್ಕೆ ಕಡಿಮೆಯಲ್ಲದಷ್ಟು ಸೀಟುಗಳನ್ನು, ರಾಜ್ಯ ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ತುಂಬತಕ್ಕದ್ದು.

(ii) ವೈದ್ಯಕೀಯ ಸೀಟುಗಳ ಸಂದರ್ಭದಲ್ಲಿ ಶೇಕಡಾ ನಲವತ್ತಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು ಮತ್ತು ದಂತ ವೈದ್ಯಕೀಯ ಸೀಟುಗಳ ಸಂದರ್ಭದಲ್ಲಿ ಶೇಕಡ ನಲವತ್ತೈದಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು, ಅಲ್ಪಸಂಖ್ಯಾತೇತರ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಅರ್ಹತಾ ಪಟ್ಟಿಯ ಮೂಲಕ ತುಂಬತಕ್ಕದ್ದು.

(iii) ಶೇಕಡಾ ಇಪ್ಪತ್ತಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು ಅನಿವಾಸಿ ಭಾರತೀಯರು/ಮ್ಯಾನೇಜ್‌ಮೆಂಟ್ ಕೋಟಾ ಅಭ್ಯರ್ಥಿಗಳ ಮೂಲಕ ತುಂಬತಕ್ಕದ್ದು.

(ಬಿ) ಅನುದಾನಿತವಲ್ಲದ ಅಲ್ಪಸಂಖ್ಯಾತೇತರ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ, ವೈದ್ಯಕೀಯ/ದಂತವೈದ್ಯಕೀಯ ಸ್ನಾತಕೋತ್ತರದ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ, ಪ್ರಿ–ಕ್ಲಿನಿಕಲ್, ಪ್ಯಾರಾಕ್ಲಿನಿಕಲ್ ಮತ್ತು ಕ್ಲಿನಿಕಲ್ ವ್ಯಾಸಂಗ ವಿಷಯದ ಮೇಲೆ, ವ್ಯಾಸಂಗ ವಿಷಯಗಳ ಸರದಿಯ ಮೂಲಕ, ಈ ಮುಂದಿನ ರೀತಿಯಲ್ಲಿ ಪ್ರತಿ ವರ್ಷವು ಮಾಡತಕ್ಕದ್ದು, ಎಂದರೆ:–

(i) ಶೇಕಡಾ ಮೂವತ್ತೂರಕ್ಕಿಂತ ಕಡಿಮೆಯಲ್ಲದಷ್ಟು ಸೀಟುಗಳನ್ನು, ರಾಜ್ಯ ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ತುಂಬತಕ್ಕದ್ದು;

(ii) ಶೇಕಡಾ ನಲವತ್ತೆರಡಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು, ಅಲ್ಪಸಂಖ್ಯಾತೇತರ ಅನುದಾನಿತವಲ್ಲದ ವೃತ್ತಿಶಿಕ್ಷಣ ಸಂಸ್ಥೆಗಳ ಸಂಘಟನೆಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಅರ್ಹತಾ ಪಟ್ಟಿಯ ಮೂಲಕ ತುಂಬತಕ್ಕದ್ದು; ಮತ್ತು

(iii) ಶೇಕಡಾ ಇಪ್ಪತ್ತೈದಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು ಅನಿವಾಸಿ ಭಾರತೀಯರು/ ಮ್ಯಾನೇಜ್‌ಮೆಂಟ್ ಕೋಟಾ ಅಭ್ಯರ್ಥಿಗಳ ಮೂಲಕ ತುಂಬತಕ್ಕದ್ದು.

(ಸಿ) ಅನುದಾನಿತವಲ್ಲದ ಅಲ್ಪಸಂಖ್ಯಾತ ಶೈಕ್ಷಣಿಕ ಸಂಸ್ಥೆಗಳಲ್ಲಿ ವೈದ್ಯಕೀಯ/ದಂತ ವೈದ್ಯಕೀಯ ಪದವಿಗೆ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ:–

(i) ಶೇಕಡಾ ಇಪ್ಪತ್ತೈದಕ್ಕಿಂತ ಕಡಿಮೆಯಲ್ಲದಷ್ಟು ಸೀಟುಗಳನ್ನು ರಾಜ್ಯ ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ತುಂಬತಕ್ಕದ್ದು;

(ii) ಶೇಕಡಾ ಐವತ್ತೈದಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು, ಅಲ್ಪಸಂಖ್ಯಾತ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಅರ್ಹತಾ ಪಟ್ಟಿಯ ಮೂಲಕ ತುಂಬತಕ್ಕದ್ದು; ಮತ್ತು

(iii) ಶೇಕಡಾ ಇಪ್ಪತ್ತಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು ಅನಿವಾಸಿ ಭಾರತೀಯರು/ ಮ್ಯಾನೇಜ್‌ಮೆಂಟ್ ಕೋಟಾ ಅಭ್ಯರ್ಥಿಗಳ ಮೂಲಕ ತುಂಬತಕ್ಕದ್ದು.

(ಡಿ) ಅನುದಾನಿತವಲ್ಲದ ಅಲ್ಪಸಂಖ್ಯಾತ ಶೈಕ್ಷಣಿಕ ಸಂಸ್ಥೆಗಳಲ್ಲಿ ಸ್ನಾತಕೋತ್ತರ ವೈದ್ಯಕೀಯ/ದಂತ ವೈದ್ಯಕೀಯಕ್ಕೆ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ, ಪ್ರಿ–ಕ್ಲಿನಿಕಲ್, ಪ್ಯಾರಾ–ಕ್ಲಿನಿಕಲ್ ಮತ್ತು ಕ್ಲಿನಿಕಲ್ ವ್ಯಾಸಂಗ ವಿಷಯಗಳ ಮೇಲೆ, ವ್ಯಾಸಂಗ ವಿಷಯಗಳ ಸರದಿಯ ಮೂಲಕ, ಪ್ರತಿ ವರ್ಷವೂ,–

(i) ಶೇಕಡಾ ಇಪ್ಪತ್ತಕ್ಕಿಂತ ಕಡಿಮೆಯಿಲ್ಲದಷ್ಟು ಸೀಟುಗಳನ್ನು ರಾಜ್ಯ ಸಾಮಾನ್ಯ ಪ್ರವೇಶ ಪರೀಕ್ಷೆ ಸಮಿತಿಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ತುಂಬತಕ್ಕದ್ದು.

(ii) ಶೇಕಡಾ ಅರವತ್ತಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು, ಅಲ್ಪಸಂಖ್ಯಾತ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಅರ್ಹತಾ ಪಟ್ಟಿಯ ಮೂಲಕ ತುಂಬತಕ್ಕದ್ದು; ಮತ್ತು

(iii) ಶೇಕಡಾ ಇಪ್ಪತ್ತಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು ಅನಿವಾಸಿ ಭಾರತೀಯರು/ ಮ್ಯಾನೇಜ್‌ಮೆಂಟ್ ಕೋಟಾ ಅಭ್ಯರ್ಥಿಗಳ ಮೂಲಕ ತುಂಬತಕ್ಕದ್ದು.

(ಇ) ಅನುದಾನಿತವಲ್ಲದ ಅಲ್ಪಸಂಖ್ಯಾತೇತರ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿನ ಇಂಜಿನಿಯರಿಂಗ್ ಪದವಿಗೆ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ,–

(i) ಶೇಕಡಾ ನಲವತ್ತೈದಕ್ಕಿಂತ ಕಡಿಮೆಯಲ್ಲದಷ್ಟು ಸೀಟುಗಳನ್ನು ರಾಜ್ಯ ಸಾಮಾನ್ಯ ಪ್ರವೇಶ ಪರೀಕ್ಷೆ ಸಮಿತಿಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ತುಂಬತಕ್ಕದ್ದು.

(ii) ಶೇಕಡಾ ಮೂವತ್ತಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು, ಅಲ್ಪ ಸಂಖ್ಯಾತೇತರ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಅರ್ಹತಾ ಪಟ್ಟಿಯ ಮೂಲಕ ತುಂಬತಕ್ಕದ್ದು;

(iii) ಶೇಕಡಾ ಇಪ್ಪತ್ತೈದಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು ಅನಿವಾಸಿ ಭಾರತೀಯರು/ ಮ್ಯಾನೇಜ್‌ಮೆಂಟ್ ಕೋಟಾ ಅಭ್ಯರ್ಥಿಗಳ ಮೂಲಕ ತುಂಬತಕ್ಕದ್ದು.

(ಎಫ್) ಅನುದಾನಿತವಲ್ಲದ ಅಲ್ಪಸಂಖ್ಯಾತ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ ಇಂಜಿನಿಯರಿಂಗ್ ಪದವಿಗೆ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಪೈಕಿ,–

(i) ಶೇಕಡಾ ನಲವತ್ತಕ್ಕಿಂತ ಕಡಿಮೆಯಲ್ಲದಷ್ಟು ಸೀಟುಗಳನ್ನು ರಾಜ್ಯ ಸರ್ಕಾರವು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ತುಂಬತಕ್ಕದ್ದು.

(ii) ಶೇಕಡಾ ಮೂವತ್ತಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು, ಅಲ್ಪಸಂಖ್ಯಾತ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಅರ್ಹತಾ ಪಟ್ಟಿಯ ಮೂಲಕ ತುಂಬತಕ್ಕದ್ದು; ಮತ್ತು

(iii) ಶೇಕಡಾ ಮೂವತ್ತಕ್ಕಿಂತ ಹೆಚ್ಚಲ್ಲದಷ್ಟು ಸೀಟುಗಳನ್ನು ಅನಿವಾಸಿ ಭಾರತೀಯರು/ ಮ್ಯಾನೇಜ್‌ಮೆಂಟ್ ಕೋಟಾ ಅಭ್ಯರ್ಥಿಗಳ ಮೂಲಕ ತುಂಬತಕ್ಕದ್ದು:

ಪರಂತು, ಅಲ್ಪಸಂಖ್ಯಾತ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿ (ಸಿ), (ಡಿ) ಮತ್ತು (ಎಫ್) ಖಂಡಗಳ ಅಡಿಯಲ್ಲಿ ಸಂಸ್ಥೆಯ ಸೀಟುಗಳನ್ನು ತುಂಬುವಾಗ, ಶೇಕಡಾ ಅರವತ್ತಾರಕ್ಕಿಂತ ಕಡಿಮೆಯಲ್ಲದಷ್ಟು ಸೀಟುಗಳನ್ನು, ಸಾಮಾನ್ಯ ಪ್ರವೇಶ ಪರೀಕ್ಷೆಯ ಅರ್ಹತಾ ಪಟ್ಟಿಯಲ್ಲಿ ಪರಸ್ಪರ ಅರ್ಹತೆಯ ಮೇಲೆ, ಯಾವ ಅಲ್ಪಸಂಖ್ಯಾತ ಸಂಸ್ಥೆಗೆ ಸೇರುವುದೋ, ರಾಜ್ಯದೊಳಗಿನ ಆ ಅಲ್ಪಸಂಖ್ಯಾತ ವಿದ್ಯಾರ್ಥಿಗಳ ಮೂಲಕ ತುಂಬತಕ್ಕದ್ದು.

(2) ಈ ಅಧಿನಿಯಮದಲ್ಲಿ ಏನೇ ಒಳಗೊಂಡಿದ್ದರೂ, (2)ನೇ ಉಪಪ್ರಕರಣದ ಅಡಿಯಲ್ಲಿ ಸಮ್ಮತಾಭಿಪ್ರಾಯದ ಒಪ್ಪಂದಕ್ಕೆ ಪ್ರವೇಶಿಸುವ ರಾಜ್ಯ ಸರ್ಕಾರದ ಸಂದರ್ಭದಲ್ಲಿ, ಸರ್ಕಾರಿ ಸೀಟುಗಳ ಮತ್ತು ಖಾಸಗಿ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳಲ್ಲಿನ ಸೀಟುಗಳ ಪ್ರವೇಶಕ್ಕಾಗಿನ ಶುಲ್ಕವು, ಸಮ್ಮತಾಭಿಪ್ರಾಯದ ಒಪ್ಪಂದದಲ್ಲಿ ಅಂಥ ಸಂಸ್ಥೆಗಳು ಮತ್ತು ಸರ್ಕಾರವು ಒಪ್ಪಿದಂತೆ ಸಂಸ್ಥೆಗಳು ನೀಡುವ ಅಂಥ ರಿಯಾಯಿತಿ ಅಥವಾ ವಿದ್ಯಾರ್ಥಿ ವೇತನದೊಂದಿಗೆ ಅಂಥ ದರದಲ್ಲಿ ಇರತಕ್ಕದ್ದು:

ಪರಂತು, ರಾಜ್ಯ ಸರ್ಕಾರ ಮತ್ತು ಪ್ರತ್ಯೇಕ ಸಂಸ್ಥೆಯು ಕೂಡಾ, ಪರಸ್ಪರ ಅಂಗೀಕರಿಸುವ ಷರತ್ತುಗಳೊಂದಿಗೆ ಸಮ್ಮತಾಭಿಪ್ರಾಯದ ಒಪ್ಪಂದಕ್ಕೆ ಸೇರಬಹುದು.

ಮತ್ತು ಪರಂತು, ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ತಿದ್ದುಪಡಿ) ಅಧಿನಿಯಮ, 2015ರ ಪ್ರಾರಂಭಕ್ಕೆ ಮೊದಲು ರಾಜ್ಯ ಸರ್ಕಾರ ಮತ್ತು ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ನಡುವೆ ನಡೆದ ಯಾವುದೇ ಸಮ್ಮತಾಭಿಪ್ರಾಯ ಒಪ್ಪಂದ ಮತ್ತು ಹೊರಡಿಸಿದ ಯಾವುದೇ ಅಧಿಸೂಚನೆ ಅಥವಾ 2015–16ನೇ ಶೈಕ್ಷಣಿಕ ವರ್ಷಕ್ಕಾಗಿ ರಾಜ್ಯ ಸರ್ಕಾರದಿಂದ ತೆಗೆದುಕೊಳ್ಳಲಾದ ಯಾವುದೇ ಅನುಷಂಗಿಕ ಕ್ರಮವು ಸಿಂಧುವೆಂದು ಮತ್ತು ಜಾರಿಗೊಳಿಸಲಾಗಿದೆ ಎಂದು ಹಾಗೂ ರಾಜ್ಯ ಸರ್ಕಾರದಿಂದ ಈ ಅಧಿನಿಯಮಕ್ಕೆ ಅನುಗುಣವಾಗಿಯೇ ಕೈಗೊಳ್ಳಲಾಗಿದೆ ಅಥವಾ ಮಾಡಲಾಗಿದೆ ಎಂದು ಭಾವಿಸತಕ್ಕದ್ದು.

**4ಬಿ. ಡೀಮ್ಡ್ ವಿಶ್ವವಿದ್ಯಾಲಯ ಸಂಸ್ಥೆಗಳಲ್ಲಿ ಪ್ರವೇಶ ವಿಧಾನ.–** (1) ವೃತ್ತಿ ಶಿಕ್ಷಣ ವ್ಯಾಸಂಗ ಕ್ರಮಗಳಿಗೆ ಪ್ರವೇಶವನ್ನು ನೀಡುವಲ್ಲಿ ವಿಶ್ವವಿದ್ಯಾಲಯ ಅನುದಾನ ಆಯೋಗದ ವಿನಿಯಮಗಳನ್ನು ಅನುಸರಿಸುವುದಕ್ಕೆ ತಪ್ಪಿದ ಡೀಮ್ಡ್ ವಿಶ್ವವಿದ್ಯಾಲಯದ ಸಂಸ್ಥೆಯ ಸಂದರ್ಭದಲ್ಲಿ, ಡೀಮ್ಡ್ ವಿಶ್ವವಿದ್ಯಾಲಯದ ಸಂಸ್ಥೆಗಳು ಅವರಲ್ಲಿನ ಸೀಟುಗಳಿಗೆ ಪ್ರವೇಶಕ್ಕಾಗಿ ಸಾಮಾನ್ಯ ಪ್ರವೇಶ ಪರೀಕ್ಷೆಯನ್ನು ನಡೆಸುವುದಕ್ಕಾಗಿ ಸಂಘಟನೆಯೊಂದನ್ನು ರಚಿಸತಕ್ಕದ್ದು ಮತ್ತು ಅಂಥ ಡೀಮ್ಡ್ ವಿಶ್ವವಿದ್ಯಾಲಯದ ಸಂಸ್ಥೆಗಳು ತಮ್ಮಲ್ಲಿನ ವೃತ್ತಿ ಶಿಕ್ಷಣ ವ್ಯಾಸಂಗ ಕ್ರಮಗಳಿಗಾಗಿ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಪ್ರವೇಶ ನೀಡತಕ್ಕದ್ದು:

ಪರಂತು, ಡೀಮ್ಡ್ ವಿಶ್ವವಿದ್ಯಾಲಯದ ಸಂಸ್ಥೆಗಳ ಸಂಘಟನೆಯು ಇಲ್ಲದಿದ್ದಾಗ, ಡೀಮ್ಡ್ ವಿಶ್ವವಿದ್ಯಾಲಯದ ಸಂಸ್ಥೆಗಳು, ಸರ್ಕಾರಿ ಸೀಟುಗಳು, ಯಾವುದಾದರೂ ಇದ್ದಲ್ಲಿ, ಅದನ್ನು ಹೊರತುಪಡಿಸಿ, ಉಳಿದವನ್ನು ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಅಥವಾ ಅನುದಾನಿತವಲ್ಲದ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಟನೆಯ ಮೂಲಕ ತುಂಬುವ ಆಯ್ಕೆಯನ್ನು ಮಾಡಬಹುದು. ಡೀಮ್ಡ್ ವಿಶ್ವವಿದ್ಯಾಲಯ ಸಂಸ್ಥೆಯು ಅಲ್ಪಸಂಖ್ಯಾತ ಸಂಸ್ಥೆಯಾಗಿದ್ದಲ್ಲಿ, ಅದು ಅಲ್ಪಸಂಖ್ಯಾತ ಶಿಕ್ಷಣ ಸಂಸ್ಥೆಗಳ ಸಂಘಟನೆಯನ್ನು ಸೇರುವ ಆಯ್ಕೆಯನ್ನು ಮಾಡಬಹುದು ಅಥವಾ ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿಯ ಮೂಲಕ ಸೀಟುಗಳನ್ನು ತುಂಬಲು ಆಯ್ಕೆ ಮಾಡಬಹುದು.

(2) ವಿಶ್ವವಿದ್ಯಾಲಯ ಅನುದಾನ ಆಯೋಗದ ಮಾರ್ಗಸೂಚಿಗಳನ್ನು ಅನುಸರಿಸದಿರುವ ಡೀಮ್ಡ್ ವಿಶ್ವವಿದ್ಯಾಲಯದ ಅಲ್ಪಸಂಖ್ಯಾತ ಅಥವಾ ಸಂದರ್ಭಾನುಸಾರವಾಗಿ ಅಲ್ಪಸಂಖ್ಯಾತೇತರ ಸಂಸ್ಥೆಗಳು, ತಮ್ಮ ಸಂಸ್ಥೆಯ ಅಂಥ ಸಂಖ್ಯೆಯ ಸೀಟುಗಳನ್ನು, ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಮತ್ತು ಸಂಘಟನೆಯು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷೆಯ ಮೂಲಕ ಹಾಗೂ ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದಂತೆ ತುಂಬತಕ್ಕದ್ದು.

(3) ಡೀಮ್ಡ್ ವಿಶ್ವವಿದ್ಯಾಲಯ ಸಂಸ್ಥೆಗಳು ವಿಶ್ವವಿದ್ಯಾಲಯ ಅನುದಾನ ಆಯೋಗದ ವಿನಿಯಮಗಳನ್ನು ಅನುಸರಿಸುತ್ತಿದ್ದು ಆದರೆ ರಾಜ್ಯ ಸರ್ಕಾರದೊಂದಿಗೆ ಸಮ್ಮತಾಭಿಪ್ರಾಯದ ಒಪ್ಪಂದಕ್ಕೆ ಒಪ್ಪಿಕೊಂಡಿದ್ದಲ್ಲಿ, ಅಂಥ ಸಮ್ಮತಾಭಿಪ್ರಾಯದ ಒಪ್ಪಂದದಲ್ಲಿ ಒಪ್ಪಬಹುದಾದುದಕ್ಕೆ ಒಳಪಟ್ಟು ಅಂಥ ಸಂಸ್ಥೆಗಳು ನೀಡುವ ಅಂಥ ರಿಯಾಯಿತಿ ಮತ್ತು ವಿದ್ಯಾರ್ಥಿವೇತನದೊಂದಿಗೆ ಅಂಥ ಶುಲ್ಕದ ದರದಲ್ಲಿ ರಾಜ್ಯ ಸರ್ಕಾರವು ನಡೆಸುವ ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿಯ ಮೂಲಕ ತುಂಬಬೇಕಾದ ಪದವಿ ಮತ್ತು ಸ್ನಾತಕೋತ್ತರ ವೈದ್ಯಕೀಯ ವ್ಯಾಸಂಗ ಕ್ರಮದಲ್ಲಿ ಎರಡರಲ್ಲೂ ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಶೇಕಡ ಇಪ್ಪತ್ತೈದಕ್ಕಿಂತ ಕಡಿಮೆಯಾಗಿರತಕ್ಕದ್ದಲ್ಲ ಮತ್ತು ಸಂಬಂಧಪಟ್ಟ ಸಂಸ್ಥೆಗಳು ಅರ್ಹತೆಯನ್ನು ಅನುಸರಿಸುವ ಮೂಲಕ ಅನಿವಾಸಿ ಭಾರತೀಯರು/ಮ್ಯಾನೇಜ್‌ಮೆಂಟ್ ಕೋಟಾದಿಂದ ತುಂಬಬೇಕಾದ ಸೀಟುಗಳು ಪ್ರವೇಶಾವಕಾಶವಿರುವ ಒಟ್ಟು ಸೀಟುಗಳ ಶೇಕಡಾ ಇಪ್ಪತ್ತೈದಕ್ಕಿಂತ ಹೆಚ್ಚಿರತಕ್ಕದಲ್ಲ. ಉಳಿದ ಶೇಕಡಾ ಐವತ್ತು, ಡೀಮ್ಡ್ ವಿಶ್ವವಿದ್ಯಾಲಯ ಸಂಸ್ಥೆಗಳು ನಡೆಸುವ ಪ್ರವೇಶ ಪರೀಕ್ಷೆಯ ಮೂಲಕ (ಪ್ರಸ್ತುತ ಅನುಸರಿಸುತ್ತಿರುವಂತೆ) ತುಂಬಬೇಕಾದ ಸಂಸ್ಥೆಯ ಸೀಟುಗಳಾಗಿರತಕ್ಕದ್ದು."

**6. 5ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 5ನೇ ಪ್ರಕರಣದಲ್ಲಿ,–

(i) (7) ನೇ ಉಪಪ್ರಕರಣದಲ್ಲಿ "ಅನುದಾನಿತವಲ್ಲದ ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘವು" ಎಂಬ ಪದಗಳು ಬರುವ ಮೊದಲು, ಎರಡು ಕಡೆಗಳಲ್ಲಿ, "ಅಲ್ಪಸಂಖ್ಯಾತೇತರ ಅಥವಾ ಸಂದರ್ಭಾನುಸಾರವಾಗಿ ಅಲ್ಪಸಂಖ್ಯಾತ" ಎಂಬ ಪದಗಳನ್ನು ಸೇರಿಸತಕ್ಕದ್ದು.

(ii) (11)ನೇ ಉಪಪ್ರಕರಣದಲ್ಲಿ "ಖಾಸಗಿ ವೃತ್ತಿಶಿಕ್ಷಣ ಸಂಸ್ಥೆಗಳ" ಎಂಬ ಪದಗಳು ಬರುವ ಮೊದಲು, ಎರಡು ಕಡೆಗಳಲ್ಲಿ "ಅಲ್ಪಸಂಖ್ಯಾತೇತರ ಅಥವಾ ಸಂದರ್ಭಾನುಸಾರವಾಗಿ ಅಲ್ಪಸಂಖ್ಯಾತ ಅನುದಾನಿತವಲ್ಲದ" ಎಂಬ ಪದಗಳನ್ನು ಸೇರಿಸತಕ್ಕದ್ದು.

(iii) (11)ನೇ ಉಪಪ್ರಕರಣದ ತರುವಾಯ, ಈ ಮುಂದಿನ ಪರಂತುಕವನ್ನು ಸೇರಿಸತಕ್ಕದ್ದು, ಎಂದರೆ:–

"ಪರಂತು, ಸರ್ಕಾರವು, ದೂರುಗಳನ್ನು ಸ್ವೀಕರಿಸಿದಾಗ ಅಥವಾ ಯಾವುದೇ ಇತರ ಏಜೆನ್ಸಿಯ ಮೂಲಕ ತನಿಖೆಯನ್ನು ನಡೆಸಿದಾಗ, ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳು ಅಥವಾ ಪ್ರತ್ಯೇಕ ಸಂಸ್ಥೆಯು ನ್ಯಾಯ ಸಮ್ಮತ, ಪಾರದರ್ಶಕತೆ ಮತ್ತು ಶೋಷಣೆ ಮಾಡದಿರುವ ತ್ರಿವಿಧ ಪರೀಕ್ಷೆಯನ್ನು ಉಲ್ಲಂಘಿಸಿ ಪ್ರವೇಶವನ್ನು ನೀಡುತ್ತಿದೆ ಎಂದು ಅಭಿಪ್ರಾಯಪಟ್ಟಲ್ಲಿ ಮತ್ತು ಅದು ಮೊದಲನೋಟಕ್ಕೆ ಸರಿ ಎಂದೆನಿಸಿದರೆ, ಅಧಿಸೂಚನೆಯ ಮೂಲಕ, ಖಾಸಗಿ ಶೈಕ್ಷಣಿಕ ಸಂಸ್ಥೆಗಳ ಸಂಘವು ಅಥವಾ ಅಂಥ ಪ್ರತ್ಯೇಕ ಸಂಸ್ಥೆಯು ಅನುಸರಿಸುತ್ತಿರುವ ಪ್ರಕ್ರಿಯೆಯು ನ್ಯಾಯಸಮ್ಮತವಾದುದಲ್ಲ, ಪಾರದರ್ಶಕತೆಯಿಂದ ಕೂಡಿರುವುದಿಲ್ಲ ಅಥವಾ ಶೋಷಣೆ ಮಾಡುತ್ತಿದೆ ಆದ್ದರಿಂದ ಇದು ಅಸಿಂಧು ಎಂದು ಘೋಷಿಸಬಹುದು ಮತ್ತು ಅಂಥ ಸಂಘದ ಅಥವಾ ಪ್ರತ್ಯೇಕ ಸಂಸ್ಥೆಯ ಎಲ್ಲಾ ಸೀಟುಗಳನ್ನು, ಸಾಮಾನ್ಯ ಪ್ರವೇಶ ಪರೀಕ್ಷಾ ಸಮಿತಿಯ ಮೂಲಕ, ಪಾರದರ್ಶಕವಾದ ರೀತಿಯಲ್ಲಿ, ಖಾಸಗಿ ವೃತ್ತಿ ಶಿಕ್ಷಣ ಸಂಸ್ಥೆಗಳ ಸಂಘಗಳು, ಖಾಸಗಿ ವಿಶ್ವವಿದ್ಯಾಲಯಗಳು ಅಥವಾ ಸಂದರ್ಭಾನುಸಾರವಾಗಿ ಡೀಮ್ಡ್ ವಿಶ್ವವಿದ್ಯಾಲಯಗಳ ಪ್ರತಿನಿಧಿಗಳೊಂದಿಗೆ, ನಿಕಟ ಮೇಲ್ವಿಚಾರಣೆಯಲ್ಲಿ ತುಂಬತಕ್ಕದ್ದೆಂದು ನಿರ್ದೇಶಿಸಬಹುದು:

ಮತ್ತು ಪರಂತು, ಅಂಥ ಯಾವುದೇ ಘೋಷಣೆಯನ್ನು ಅಂಥ ಸಂಘ ಅಥವಾ ಸಂಸ್ಥೆಗೆ ಪೂರ್ವನೋಟಿಸನ್ನು ನೀಡದೇ ಮಾಡತಕ್ಕದ್ದಲ್ಲ."

**7. 7ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 7ನೇ ಪ್ರಕರಣದಲ್ಲಿ,–

(ಎ) (1)ನೇ ಉಪಪ್ರಕರಣದ (ಇ) ಖಂಡದಲ್ಲಿ "ಸಂಸ್ಥೆಯ ಬೆಳವಣಿಗೆಗೆ" ಎಂಬ ಪದಗಳಿಗೆ ಮೊದಲು "ಶೇಕಡಾ ಎಂಟಕ್ಕಿಂತ ಹೆಚ್ಚಿಲ್ಲದಂತೆ" ಎಂಬ ಪದಗಳನ್ನು ಸೇರಿಸತಕ್ಕದ್ದು;

(ಬಿ) (4)ನೇ ಉಪಪ್ರಕರಣದಲ್ಲಿ "ಹತ್ತು ಲಕ್ಷ ರೂಪಾಯಿಗಳವರೆಗೆ" ಎಂಬ ಪದಗಳ ತರುವಾಯ "ಅಥವಾ ಸರ್ಕಾರವು ನಿಗದಿಪಡಿಸಿದ ಶುಲ್ಕಕ್ಕಿಂತ ಹೆಚ್ಚಿಗೆ ಸಂಗ್ರಹಿಸಿದ ಮೊತ್ತಕ್ಕೆ ಎರಡರಷ್ಟು ಇದರಲ್ಲಿ ಯಾವುದು ಹೆಚ್ಚೋ ಅಷ್ಟು" ಎಂಬ ಪದಗಳನ್ನು ಸೇರಿಸತಕ್ಕದ್ದು.

(ಸಿ) (4)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(5) ಯಾವುದೇ ಖಾಸಗಿ ಅನುದಾನಿತವಲ್ಲದ ಶಿಕ್ಷಣ ಸಂಸ್ಥೆಯು,–

(ಎ) ಹಾಗೆ ಸಂಗ್ರಹಿಸಲಾದ ಶುಲ್ಕದಿಂದ ಸಂಚಯವಾದ ಮೊತ್ತವನ್ನು ತನ್ನ ಸೋದರ ಸಂಸ್ಥೆಗಳಿಗೆ ವರ್ಗಾಯಿಸತಕ್ಕದ್ದಲ್ಲ;

(ಬಿ) ಹಾಗೆ ಸಂಗ್ರಹಿಸಲಾದ ಶುಲ್ಕದಿಂದ ನಿರ್ಮಿಸಲಾದ ಸ್ಥಿರ ಸ್ವತ್ತನ್ನು ರಾಜ್ಯ ಸರ್ಕಾರದ ಪೂರ್ವಾನುಮತಿಯಿಲ್ಲದೇ ವರ್ಗಾಯಿಸತಕ್ಕದ್ದಲ್ಲ.

(6) ಪ್ರತಿಯೊಂದು ವೃತ್ತಿ ಖಾಸಗಿ ಶಿಕ್ಷಣ ಸಂಸ್ಥೆಯು, ಪ್ರತಿವರ್ಷವು, ಚಾರ್ಟರ್ಡ್ ಅಕೌಂಟೆಂಟ್‌ಗಳ ಮೂಲಕ, ಯುಕ್ತವಾಗಿ ಪರಿಶೋಧಿಸಲ್ಪಟ್ಟ ತನ್ನ ವಾರ್ಷಿಕ ಲೆಕ್ಕಪತ್ರದ ತಃಖ್ತೆ ಮತ್ತು ಆಸ್ತಿ ಹಾಗೂ ಹೊಣೆಗಾರಿಕೆಗಳ ತಃಖ್ತೆಯನ್ನು ನಿಯಮಿಸಲಾದ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು."

**8. 11ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 11ನೇ ಪ್ರಕರಣದ (2)ನೇ ಉಪಪ್ರಕರಣದ (iii)ನೇ ಖಂಡದಲ್ಲಿ "ಸಮಿತಿಯ" ಎಂಬ ಪದಕ್ಕೆ "ಸಮಿತಿಯು" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**9. 19ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 19ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ "ಈ ಪ್ರಕರಣದ ಅಡಿಯಲ್ಲಿನ" ಎಂಬ ಪದಗಳಿಗೆ "ಈ ಅಧಿನಿಯಮದ ಅಡಿಯಲ್ಲಿನ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಬಿ. ಗುಂಜಿಗಾವಿ**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ೪) (450 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ– *IV-A* | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೧೧, ೨೦೧೫ (ಭಾದ್ರಪದ ೨೦, ಶಕ ವರ್ಷ ೧೯೩೭) | ನಂ. ೯೮೪ |
| *Part– IV-A* | *Bengaluru, Friday, September 11, 2015 (Bhadrapada 20, Shaka Varsha 1937)* | *No. 984* |

**PARLIAMENTARY AFFAIRS SECRETARIAT**

**NOTIFICATION**

**No. SAMVYASHAE 28 SHASANA 2015, Bengaluru, dated: 11.09.2015**

Ordered that the translation of ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ತಿದ್ದುಪಡಿ) ಅಧಿನಿಯಮ, 2015 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ:39) in the English language, be published as authorised by the Governor of Karnataka under clause (3) of Article 348 of the constitution of India in the Karnataka Gazette for general information.

The following translation of ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗದಿ) (ತಿದ್ದುಪಡಿ)ಅಧಿನಿಯಮ, 2015 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ:39) in the English language is published in the Official Gazette under the authority of the Governor of Karnataka under clause (3) of Article 348 of the Constitution of India.

## KARNATAKA ACT NO. 39 OF 2015

(First Published in the Karnataka Gazette Extra-ordinary on the Eleventh day of September, 2015)

## THE KARNATAKA PROFESSIONAL EDUCATIONAL INSTITUTIONS (REGULATION OF ADMISSION AND DETERMINATION OF FEE) (AMENDMENT) ACT, 2015

(Received the assent of the Governor on the Fifth day of September, 2015)

An Act to amend the Karnataka Professional Educational Institutions (Regulation of Admission and Determination of Fee) Act, 2006.

Whereas, it is expedient to amend the Karnataka Professional Educational Institutions (Regulation of Admission and Determination of Fee) Act, 2006 (Karnataka Act 8 of 2006), to provide for,-

(1) a legal frame work which is acceptable by majority of the Professional Educational Institutions and to empower the State Government to enter into consensual agreement with association of non-minority or minority private unaided professional educational institutions; to protect the interest of merit students of the State and the institutions through consensual agreement by providing a quota of Government seats in Private Educational Institutions to be filled by Common Entrance Test Committee constituted by the State; and to see that no student selected through Common Entrance Test Committee is over charged or the interest of Karnataka Student is protected by providing concessions and scholarship while entering into consensual agreement with private educational institutions; and

(2) Guidelines to the Fee Regulatory Committee to fix the fee appropriately at affordable rate as mandated by Supreme Court, so that viability of situation is maintained and no student is over charged.

Now therefore, be it enacted by the Karnataka State Legislature in the sixty-sixth year of the Republic of India, as follows:-

**1. Short title and commencement.-** (1) This Act may be called the Karnataka Professional Educational Institutions (Regulation of Admission and Determination of Fee) (Amendment) Act, 2015.

(2) It shall come into force at once.

**2. Amendment of section 2.-** In section 2 of the Karnataka Professional Educational Institutions (Regulation of Admission and Determination of Fee) Act, 2006 (Karnataka Act 8 of 2006) (hereinafter referred to as the principal Act),-

(a) for clause (a), the following shall be substituted, namely:-

"(a) "Admission" means admission made to Professional Educational Courses at Admission Centre through Common Entrance Test based on merit."

(b) in clause (c), after the words "admissions in private", the words "aided or" shall be inserted.

(c) for clause (f), the following shall be substituted, namely:-

"(f) "Common Entrance Test Cell or Committee" means the agency of the State Government constituted under section 3 which conducts the Common Entrance Test".

(d) after clause (f), the following shall be inserted, namely:-

"(ff) "deemed University institutions" means the institutions of Professional Educational courses established or maintained by deemed Universities located in the State of Karnataka."

(e) for clause (i), the following shall be substituted, namely:-

"(i) "Government seats" means all the seats in Government colleges, university constituent colleges, such number of the seats in Private Aided Professional Educational Institutions as may be notified by the State Government and such number of the seats in unaided minority and non-minority professional educational institutions and seats in private universities and deemed universities as may be notified by the State Government in accordance with the consensus arrived at between the private professional educational institutions, private universities, deemed universities and the State Government;"

(f) after clause (j), the following shall be inserted, namely:-

"(jj) "Institutional seats" means the seats other than Government seats filled by Private unaided Professional Educational Institutions through common entrance test conducted by association of non-minority or minority Private unaided Professional Educational Institutions."

(g) after clause (k), the following shall be inserted, namely:-

"(kk) "Karnataka Student" means persons who have studied in such educational institutions in the State of Karnataka run or recognized by the Government and for such number of years as may be prescribed."

**3. Amendment of section 3.-** In section 3 of the principal Act,-

(a) in sub-section (1) ,-

(i) for clause (a) the following shall be substituted, namely:-

| | | | |
|---|---|---|---|
| "(a) | The Principal Secretary to Government, Department of Higher Education | - | Chairperson |
| (a1) | The Secretary to Government, Department of Medical Education | - | Co-Chairperson |
| (a2) | Vice Chancellor of either Rajiv Gandhi University of Health Sciences or Vishveshwaraiah Technological University, nominated by the State Government. | - | Member |

(ii) in clause (e), for the word "Chairperson", the words "State Government" shall be substituted.

(b) after sub-section (5), the following shall be inserted, namely:-

"(5A) Any vacancy in the Constitution of the Committee shall not invalidate the proceedings of the Committee."

**4. Substitution of section 4.-** For section 4 of the principal Act, the following shall be substituted, namely:-

"**4. Method of Admission in unaided professional educational institutions.-** Association of all unaided professional educational institutions whether minority or non-minority imparting professional education in any one discipline shall make admission through Common Entrance Test:

Provided that any unaided professional educational institution or deemed university institutions, which would like to make admission for seats other than Government seats through Common Entrance Test Committee, may also exercise their option to join and to make admission through Common Entrance Test Committee in the order of merit and through counseling."

**5. Insertion of new sections 4A and 4B.-** After section 4 of the principal Act, the following shall be inserted, namely:-

"**4A. Method of admission in case of consensual agreement.-** (1) Notwithstanding anything contained in this Act, in case if the State Government and the association of unaided professional educational institutions whether minority or non-minority agree to enter into a consensual arrangement or agreement with regard to sharing of seats and fixation of fee in respect of such seats in said unaided professional educational institutions, in such year, the admission to such number of seats as agreed upon by the State Government and the private professional educational institutions, shall be done by the common entrance test committee as Government seats in accordance with such rules as may be prescribed by the Government regarding selection of candidates for admission to Government seats in Professional Educational institutions and reservation policy of the State including reservation under Article 371J. The remaining seats shall be filled through the Common Entrance Test conducted by the association of private professional educational institutions or association of religious and linguistic minority institutions on the basis of merit followed by centralised counselling, in a fair, transparent and non-exploitative manner as per the consensual agreement subject to such rules as may be prescribed. Subject to the consensual arrangement or agreement the State Government may, by notification, publish the seat matrix to be filled by the State common entrance test committee and the association of private unaided professional educational institutions in the manner as specified below, namely:-

(A) Out of the total intake of Under-graduate Medical or Dental seats, in an unaided non-minority professional educational institutions:-

(i) not less than forty percent of the seats in case of Medical seats and not less than thirty five percent of the seats in case of Dental seats shall be filled up through Common Entrance Test conducted by State Common Entrance Test Committee;

(ii) not more than forty percent of the seats in case of Medical seats and not more than Forty five percent of the seats in case of Dental seats shall be filled up by the merit list of Common Entrance Test conducted by the Association of non-minority unaided Professional Educational Institutions;

(iii) not more than twenty percent of the seats shall be filled up by Non-Resident Indians/Management quota candidates;

(B) Out of the total intake of Post-graduate Medical/Dental seats, in an unaided non-minority professional educational institutions, across the pre-clinical, para-clinical and clinical disciplines which shall be done by rotation of disciplines every year in the following manner, namely:-

(i) not less than thirty-three percent of the seats shall be filled up through Common Entrance Test conducted by State Common Entrance Test Committee;

(ii) not more than forty-two percent of the seats shall be filled up by the merit list of Common Entrance Test conducted by the Association of non-minority unaided Professional Educational Institutions; and

(iii) not more than twenty-five percent of the seats shall be filled up by Non-Resident Indians/Management quota candidates.

(C) Out of the total intake of Under-graduate Medical/Dental seats, in an unaided minority educational institutions:-

(i) not less than twenty-five percent of the seats shall be filled up through Common Entrance Test conducted by State Common Entrance Test Committee;

(ii) not more than fifty-five percent of the seats shall be filled up by the merit list of Common Entrance Test conducted by the Association of minority unaided Professional Educational Institutions; and

(iii) not more than twenty percent of the seats shall be filled up by Non-Resident Indians/Management quota candidates.

(D) Out of the total intake of Post-graduate Medical/Dental seats, in an unaided minority educational institutions, across the pre-clinical, para-clinical and clinical disciplines which shall be by rotation of disciplines every year:-

(i) not less than twenty percent of the seats shall be filled up through Common Entrance Test conducted by State Common Entrance Test Committee;

(ii) not more than sixty percent of the seats shall be filled up by the merit list of Common Entrance Test conducted by the Association of minority unaided Professional Educational Institutions; and

(iii) not more than twenty percent of the seats shall be filled up by Non-Resident Indians/Management quota candidates.

(E) Out of the total intake of under-graduate engineering in unaided non-minority professional educational institutions,-

(i) not less than forty-five percent of the seats shall be filled up through Common Entrance Test conducted by State Common Entrance Test Committee;

(ii) not more than thirty percent of the seats shall be filled up by the merit list of Common Entrance Test conducted by the Association of non-minority unaided Professional Educational Institutions; and

(iii) not more than twenty-five percent of the seats shall be filled up by Non-Resident Indians/Management quota candidates.

(F) Out of the total intake of under-graduate engineering in unaided minority professional educational institutions,-

(i) Not less than forty percent of the seats shall be filled up through Common Entrance Test conducted by the State Government;

(ii) not more than thirty percent of the seats shall be filled up by the merit list of Common Entrance Test conducted by the Association of minority unaided Professional Educational Institutions; and

(iii) not more than thirty percent of the seats shall be filled up by Non-Resident Indians/Management quota candidates.

Provided that, in case of minority unaided professional educational institutions while filling institutional seats under clause (C), (D) and (F) not

less than sixty-six percent of the seats shall be filled by minority students within the State belonging to minority to which the institution belong of the interse merit in the merit list of common entrance test.

(2) Notwithstanding anything contained in this Act, in case of the State Government entering into consensual agreement under sub-section (2), the fee for admission to Government seats and in private unaided professional educational institutional seats shall be at such rate with such concessions or Scholarship by the Institutions as agreed upon by such institutions and the Government in the Consensual Agreement.

Provided that the State Government and individual institution can also enter into consensual agreement with mutually acceptable conditions.

Provided further that any consensual agreement that has entered into between the State Government and the Association of private professional educational institutions and any notification issued or any consequential action taken by the State Government for the Academic Year 2015-16 before the commencement of the Karnataka Professional Educational Institutions (Regulation of Admission and Determination of Fee) (Amendment) Act, 2015 shall be deemed to be valid and effective as if they have been done or taken by the State Government in accordance with this Act.

**4B. Method of Admission in Deemed University Institutions.-** (1) In case Deemed University institution fails to follow UGC Regulations in making admission to Professional Education Courses, the Deemed University institutions shall constitute an association for conduct of Common Entrance Test for admission to their seats and such Deemed University Institutions shall make admission through Common Entrance Test for their Professional Educational Courses:

Provided that when there is no association of Deemed University Institutions, the deemed university institutions may opt to fill up other than Government seats, if any, through Common Entrance Test Committee or through association of un-aided Professional Educational Institutions. In case deemed university institution is a minority institution, it may opt to join the association of minority educational institutions or it may opt to fill up seats through Common Entrance Test Committee.

(2) The deemed university non-minority or minority Institutions, as the case may be, which do not follow UGC guidelines shall fill up such number of seats in their institution through Common Entrance Test Committee and Common Entrance Test conducted by association as may be notified by the State Government.

(3) If Deemed University Institutions follow the UGC Regulations but agrees to consensual agreement with the State Government subject to such consensual agreement the seat sharing formula shall be not less than 25 percent of the total intake both in Undergraduate and Post-graduate Medical Course to be filled up through Common Entrance Test Committee conducted by the State Government at such rate of fee with such concession and scholarship by such Institutions as may be agreed upon in the Consensual Agreement and not more than 25 percent of the total intake to be filled up

by Non-Resident Indians/Management Quota by following merit by the institutions concerned. The remaining 50% shall be the Institutional seats to be filled up through Entrance Examination conducted by the Deemed University Institutions (as currently followed)."

**6. Amendment of section 5.-** In section 5 of the principal Act,-

(i) in sub-section (7), after the words "association of unaided private professional educational institutions" occurring in two places, the words "non-minority or minority as the case may be " shall be inserted.

(ii) in sub-section (11), after the words "association of unaided private professional educational institutions" occurring in two places, the words "non-minority or minority as the case may be " shall be inserted.

(iii) after sub-section (11), the following proviso shall be inserted, namely:-

"Provided that Government, on receiving complaints or on investigation by any other agency, if it is of the opinion that association of private professional educational Institutions or any individual Institution is making admissions in violation of triple test of fairness Transparency and non-exploitation and it appears prima facie to be true, may by notification, declare that the procedure followed by association of private Educational Institutions or such individual institution is unfair, non-transparent or exploitative and therefore invalid and may direct that all seats of such association or individual institution shall be filled through Common Entrance Test Committee in a transparent manner, under close supervision having representatives of the association of the private professional educational institutions, private universities, or deemed universities, as the case may be:

Provided further that no such declaration shall be made without giving prior notice to such association or institution."

**7. Amendment of section 7.-** In section 7 of the Principal Act,-

(a) in sub-section (1), in clause (e), the words “not more than eight percent” shall be inserted at the end;

(b) in sub-section (4), after the words "upto rupees ten lakhs", the words "or the double the amount collected over and above the fee fixed by the Government whichever is higher" shall be inserted.

(c) after sub-section (4), the following shall be inserted, namely:-

"(5) No private unaided educational institution shall,-

(a) transfer funds accumulated out of the fee so collected, to its sister institutions;

(b) transfer immovable property constructed out of the fee so collected without prior permission of the State Government.

(6) Every professional private educational institution shall submit its annual statement of accounts and statement of assets and liabilities to the prescribed authority duly audited by the chartered accountant every year."

**8. Amendment of section 11.-** In section 11 of the principal Act, in sub-section (2), in clause (iii), for the word "barrowed", the word "borrowed" shall be substituted.

**9. Amendment of section 19.-** In section 19 of the Principal Act, in sub-section (2), for the words "under this section", the words "under this Act" shall be substituted.

The above translation of ಕರ್ನಾಟಕ ವೃತ್ತಿ ಶಿಕ್ಷಣ ಸಂಸ್ಥೆಗಳ (ಪ್ರವೇಶ ನಿಯಂತ್ರಣ ಮತ್ತು ಶುಲ್ಕ ನಿಗಧಿ) (ತಿದ್ದುಪಡಿ) ಅಧಿನಿಯಮ, 2015 (2015ರ ಕರ್ನಾಟಕ ಅಧಿನಿಯಮ ಸಂಖ್ಯೆ: 39) be published in the Official Gazette under clause (3) of Article 348 of the Constitution of India.

**VAJUBHAI VALA**
**GOVERNOR OF KARNATAKA**

By Order and in the name of the Governor of Karnataka

**S.B. GUNJIGAVI**
Secretary to Government
Department of Parliamentary Affairs

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ8) (500 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– IV-A | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೧೧, ೨೦೧೫ (ಭಾದ್ರಪದ ೨೦, ಶಕ ವರ್ಷ ೧೯೩೭) | ನಂ. ೯೮೫ |
|---|---|---|
| Part– IV-A | Bengaluru, Friday, September 11, 2015 (Bhadrapada 20, Shaka Varsha 1937) | No. 985 |


ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಸಿಆಸುಇ 111 ನಾಸೇಖಾ 2015, ಬೆಂಗಳೂರು, ದಿನಾಂಕ: 07–9–2015**

ಕರ್ನಾಟಕ ಸಕಾಲ ಸೇವೆಗಳ ಅಧಿನಿಯಮ, 2011 ಮತ್ತು (ತಿದ್ದುಪಡಿ) ಅಧಿನಿಯಮ 2014 ಇದರ ಪ್ರಕರಣ 4ರಲ್ಲಿನ ಹಾಗೂ ಕರ್ನಾಟಕ ಸಾಮಾನ್ಯ ಖಂಡಗಳ ಅಧಿನಿಯಮ 1899 (KA.III 1899) ರ ಪ್ರಕರಣ 21 ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಅನುಸೂಚಿಯನ್ನು ಈ ಕೆಳಗಿನಂತೆ ತಿದ್ದುಪಡಿ ಮಾಡಿದೆ. ಅದು ಯಾವುದೆಂದರೆ:

1. ಶೀರ್ಷಿಕೆ " 13 – ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ" ಯಲ್ಲಿ ಉಪ ಶೀರ್ಷಿಕೆ-Iರ ಮೀನುಗಾರಿಕೆ ಇಲಾಖೆಯ 09 ನೇ ಸೇವೆಯ ನಂತರ ಉಪ ಶೀರ್ಷಿಕೆ "II–ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ" ಯ ಈ ಕೆಳಕಂಡ ಸೇವೆಗಳ ನಮೂದುಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು, ಎಂದರೆ:–

| ಕ್ರ. ಸಂ | ಸೇವೆಗಳ ಪಟ್ಟಿ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಆರೋಗ್ಯ ದೃಢೀಕರಣ ಪತ್ರ | ಪಶುವೈದ್ಯಾಧಿಕಾರಿ/ ಸಹಾಯಕ ನಿರ್ದೇಶಕರು | 3 ದಿನಗಳು | ಉಪ ನಿರ್ದೇಶಕರು | 3 ದಿನಗಳು | ಜಂಟಿ ನಿರ್ದೇಶಕರು (ಅಭಿವೃದ್ಧಿ) | 15 ದಿನಗಳು |
| 2 | ಮರಣೋತ್ತರ ಪರೀಕ್ಷೆ ದೃಢೀಕರಣ ಪತ್ರ | ಪಶುವೈದ್ಯಾಧಿಕಾರಿ/ ಸಹಾಯಕ ನಿರ್ದೇಶಕರು | 7 ದಿನಗಳು | ಉಪ ನಿರ್ದೇಶಕರು | 7 ದಿನಗಳು | ಜಂಟಿ ನಿರ್ದೇಶಕರು (ಅಭಿವೃದ್ಧಿ) | 15 ದಿನಗಳು |
| 3 | ಕುಕ್ಕುಟ ಮತ್ತು ಪಶು ಆಹಾರ ಉತ್ಪಾದನಾ ಘಟಕಕ್ಕೆ ಪರವಾನಗಿ | ಸಹಾಯಕ ನಿರ್ದೇಶಕರು, ಕೆ.ಸಿ.ಪಿ.ಎಫ್. | 30 ದಿನಗಳು | ಜಂಟಿ ನಿರ್ದೇಶಕರು (ಕ್ಷೇತ್ರ) | 30 ದಿನಗಳು | ನಿರ್ದೇಶಕರು | 30 ದಿನಗಳು |
| 4 | ನಿಗದಿತ ಸಮಯದಲ್ಲಿ ಪರಿಹಾರಧನ ನೀಡುವುದು | ಸಹಾಯಕ ನಿರ್ದೇಶಕರು, ಕುರಿ ಮತ್ತು ಉಣ್ಣೆ ಅಭಿವೃದ್ಧಿ ಮಂಡಳಿ | 15 ದಿನಗಳು | ಉಪ ನಿರ್ದೇಶಕರು, ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಮಂಡಳಿ | 15 ದಿನಗಳು | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಮಂಡಳಿ | 15 ದಿನಗಳು |
| 5 | ಜಾನುವಾರು ಸಾಗಾಣಿಕೆಗೆ ಲಸಿಕೆ ದೃಢೀಕರಣ ನೀಡುವುದು | ಪಶು ವೈದ್ಯಾಧಿಕಾರಿ | 1 ದಿನ | ಸಹಾಯಕ ನಿರ್ದೇಶಕರು | 1 ದಿನ | ಉಪ ನಿರ್ದೇಶಕರು | 1 ದಿನ |

| ಕ್ರ. ಸಂ | ಸೇವೆಗಳ ಪಟ್ಟಿ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 6 | ಸಾರ್ವಜನಿಕ ಕುಂದುಕೊರತೆಗಳ ನಿವಾರಣೆ | ಸಹಾಯಕ ನಿರ್ದೇಶಕರು | 10 ದಿನಗಳು | ಉಪ ನಿರ್ದೇಶಕರು | 10 ದಿನಗಳು | ಆಯುಕ್ತರು | 10 ದಿನಗಳು |

2. ಶೀರ್ಷಿಕೆ " 21 – **ಜಲಸಂಪನ್ಮೂಲ ಇಲಾಖೆ"** ಯ 27ನೇ ಸೇವೆಯ ನಂತರ ಉಪ ಶೀರ್ಷಿಕೆ – "I-ಸಣ್ಣ ನೀರಾವರಿ ಇಲಾಖೆಯ (ಅಂತರ್ಜಲ ನಿರ್ದೇಶನಾಲಯ) ಈ ಕೆಳಕಂಡ ಸೇವೆಗಳ ನಮೂದುಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು, ಎಂದರೆ:–

| ಕ್ರ ಸಂ | ಸೇವೆಗಳ ಪಟ್ಟಿ | ಹೆಸರಿಸಲಾದ ಅಧಿಕಾರಿ | ಹೆಸರಿಸಲಾದ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಸಕ್ಷಮ ಅಧಿಕಾರಿ | ಸಕ್ಷಮ ಅಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ | ಮೇಲ್ಮನವಿ ಪ್ರಾಧಿಕಾರ | ಮೇಲ್ಮನವಿ ಪ್ರಾಧಿಕಾರಿಯು ವಿಲೆ ಮಾಡುವುದಕ್ಕೆ ಕಾಲಮಿತಿ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಭೂ ವೈಜ್ಞಾನಿಕ ವಿಧಾನದಿಂದ ಬಾವಿ/ಕೊಳವೆ ಬಾವಿ ಸ್ಥಳಾಯ್ಕೆಗೆ ತಾಂತ್ರಿಕ ಸಲಹೆ | ಭೂವಿಜ್ಞಾನಿ/ ಭೂ ಭೌತ ವಿಜ್ಞಾನಿ | 45 ಕೆಲಸದ ದಿನಗಳು | ಸಂಬಂಧಿಸಿದ ಜಿಲ್ಲೆಗಳ ಉಪ ನಿರ್ದೇಶಕರು/ ಹಿರಿಯ ಭೂ ವಿಜ್ಞಾನಿ | 30 ಕೆಲಸದ ದಿನಗಳು | ಹೆಚ್ಚುವರಿ ನಿರ್ದೇಶಕರು | 30 ಕೆಲಸದ ದಿನಗಳು |
| 2 | ಭೂ ಭೌತ ವಿಧಾನದಿಂದ ಬಾವಿ/ಕೊಳವೆ ಬಾವಿ ಸ್ಥಳಾಯ್ಕೆಗೆ ತಾಂತ್ರಿಕ ಸಲಹೆ | ಭೂವಿಜ್ಞಾನಿ/ ಭೂ ಭೌತ ವಿಜ್ಞಾನಿ | 45 ಕೆಲಸದ ದಿನಗಳು | ಸಂಬಂಧಿಸಿದ ಜಿಲ್ಲೆಗಳ ಉಪ ನಿರ್ದೇಶಕರು/ ಹಿರಿಯ ಭೂವಿಜ್ಞಾನಿ | 30 ಕೆಲಸದ ದಿನಗಳು | ಹೆಚ್ಚುವರಿ ನಿರ್ದೇಶಕರು | 30 ಕೆಲಸದ ದಿನಗಳು |
| 3 | ಕರ್ನಾಟಕ ಅಂತರ್ಜಲ ಪ್ರಾಧಿಕಾರದಲ್ಲಿ ರಿಗ್ ಯಂತ್ರಗಳ ನೋಂದಣಿ | ಭೂವಿಜ್ಞಾನಿ/ ಭೂಭೌತ ವಿಜ್ಞಾನಿ/ ಸಂಬಂಧಪಟ್ಟ ಕೊರೆಯುವ ಅಭಿಯಂತರರು | 30 ಕೆಲಸದ ದಿನಗಳು | ಸಂಬಂಧಿಸಿದ ಜಿಲ್ಲೆಗಳ ಉಪ ನಿರ್ದೇಶಕರು/ ಹಿರಿಯ ಭೂವಿಜ್ಞಾನಿ | 15 ಕೆಲಸದ ದಿನಗಳು | ನಿರ್ದೇಶಕರು | 30 ಕೆಲಸದ ದಿನಗಳು |
| 4 | ಅಂತರ್ಜಲದ ರಾಸಾಯನಿಕ ವಿಶ್ಲೇಷಣೆ | 1. ರಸಾಯನ ತಜ್ಞರು, ಉಪ ನಿರ್ದೇಶಕರ ಕಛೇರಿ ಬೆಳಗಾಂ/ ಗುಲ್ಬರ್ಗಾ/ ಚಿತ್ರದುರ್ಗ<br>2. ರಸಾಯನ ತಜ್ಞರು, ಹಿರಿಯ ಭೂವಿಜ್ಞಾನಿಗಳ ಕಛೇರಿ, ಬಳ್ಳಾರಿ/ ಧಾರವಾಡ/ ಮೈಸೂರು | 15 ಕೆಲಸದ ದಿನಗಳು | 1. ಸಂಬಂಧಿಸಿದ ಆಯಾ ಜಿಲ್ಲೆಯ ಉಪ ನಿರ್ದೇಶಕರು<br>2. ಸಂಬಂಧಿಸಿದ ಆಯಾ ಜಿಲ್ಲೆಯ ಹಿರಿಯ ಭೂವಿಜ್ಞಾನಿಗಳು | 15 ಕೆಲಸದ ದಿನಗಳು | ಮುಖ್ಯ ರಸಾಯನ ತಜ್ಞರು | 15 ಕೆಲಸದ ದಿನಗಳು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಆರ್. ಶೋಭಾ**
ಆಡಳಿತಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ಆಸು–ನಾಸೇ), ಸಕಾಲ ಮಿಷನ್

